# ಗುರಿ, ನೀತಿ, ನಿಯಮ ಮತ್ತು ಸಂಘಟನೆ

## AIMS, POLICY, RULES & ORGANISATION



## ಭಾಗ - II
## ಸ್ಕೌಟ್ ವಿಭಾಗ

ಗುರಿ

ನೀತಿ

ನಿಯಮ

ಸಂಘಟನೆ


**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್**

#39, ಶಾಂತಿಗೃಹ, ಅರಮನೆ ರಸ್ತೆ, ಬೆಂಗಳೂರು 560 001

ದೂ.: 080-22260017, 22267470

info@bsgkarnataka.org, www.bsgkarnataka.org

## ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಾರ್ಥನೆ

ದಯಾ ಕರ್ ದಾನ್ ಭಕ್ತೀ ಕಾ
ಹಮೇ ಪರಮಾತ್ಮಾ ದೇನಾ ।
ದಯಾ ಕರನಾ ಹಮಾರೀ
ಆತ್ಮಾ ಮೆ ಶುದ್ಧತಾ ದೇನಾ ॥

ಹಮಾರೆ ಧ್ಯಾನ್ ಮೆ ಆವೋ
ಪ್ರಭು, ಆಂಖೋಮೆ ಬಸ್ ಜಾವೋ ।
ಅಂಧೇರೆ ದಿಲ್ ಮೆ ಆಕರ್ ಕೆ
ಪರಂಜ್ಯೋತಿ ಜಗಾದೇನಾ ॥

ಬಹಾ ದೋ ಪ್ರೇಮ್ ಕೀ ಗಂಗಾ,
ದಿಲೋ ಮೆ ಪ್ರೇಮ್ ಕಾ ಸಾಗರ್ ।
ಹಮೆ ಆಪಸ್ ಮೆ ಮಿಲ್ ಜುಲ್ ಕರ್
ಪ್ರಭು, ರೆಹನಾ ಸಿಖಾದೇನಾ ॥

ಹಮಾರಾ ಕರ್ಮ್ ಹೋ ಸೇವಾ,
ಹಮಾರಾ ಧರ್ಮ್ ಹೋ ಸೇವಾ ।
ಸದಾ ಈಮಾನ್ ಹೋ ಸೇವಾ,
ವಹ್ ಸೇವಕ್ ಚರ್ ಬನಾದೇನಾ ॥

ವತನ್ ಕೆ ವಾಸತೆ ಜೀನಾ,
ವತನ್ ಕೆ ವಾಸತೆ ಮರನಾ ।
ವತನ್ ಪರ್ ಜಾನ್ ಫಿದಾ ಕರ್‌ನಾ
ಪ್ರಭು, ಹಮ್‌ಕೋ ಸಿಖಾ ದೇನಾ
॥ ದಯಾಕರ್ ॥

## ಧ್ವಜಗೀತೆ



ಭಾರತ್ ಸ್ಕೌಟ್ ಗೈಡ್ ಝಂಡಾ
ಊಂಚಾ ಸದಾ ರಹೇಗಾ ।
ಊಂಚಾ ಸದಾ ರಹೇಗಾ ಝಂಡಾ
ಊಂಚಾ ಸದಾ ರಹೇಗಾ ॥

ನೀಲಾ ರಂಗ್ ಗಗನ್ ಸಾ ವಿಸ್ತೃತ
ಭಾತೃ ಭಾವ್ ಫೈಲಾತಾ ।
ತ್ರಿದಲ ಕಮಲನಿತ್ ತೀನ್
ಪ್ರತಿಜ್ಞಾವೊಂ ಕೀ ಯಾದ್ ದಿಲಾತಾ ।
ಔರ್ ಚಕ್ರ ಕಹತಾಹೈ
ಪ್ರತಿಪಲ್ ಆಗೆ ಕದಂ ಬಢೇಗಾ ॥

ಊಂಚಾ ಸದಾ ರಹೇಗಾ ಝಂಡಾ
ಊಂಚಾ ಸದಾ ರಹೇಗಾ ।
ಭಾರತ್ ಸ್ಕೌಟ್ ಗೈಡ್ ಝಂಡಾ
ಊಂಚಾ ಸದಾ ರಹೇಗಾ ॥

# ಗುರಿ, ನೀತಿ, ನಿಯಮಗಳು ಮತ್ತು ಸಂಘಟನೆ

## ಎ.ಪಿ.ಆರ್.ಓ. – ಭಾಗ 2

ಸ್ಕೌಟ್ ಶಾಖೆ

## ಸ್ಕೌಟ್ ವಿಭಾಗ


ಅನುವಾದ

**ಎನ್. ಶ್ರೀನಿವಾಸನ್, ಎಲ್.ಟಿ. (ಸ್ಕೌಟ್ಸ್)**

ಸಹಾಯಕ ರಾಜ್ಯ ಆಯುಕ್ತರು (ಕಾರ್ಯಕ್ರಮ ಮತ್ತು ತರಬೇತಿ)

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

**ರಾ. ಚಂದ್ರಶೇಖರನ್, ಎಲ್.ಟಿ. (ಕಬ್)**

ಮಾಜಿ ಸ್ಥಾನಿಕ ಆಯುಕ್ತರು (ಪ್ರಕಟಣೆಗಳು)

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ





**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

ರಾಜ್ಯ ಕೇಂದ್ರ ಕಛೇರಿ

ನಂ.39, ಶಾಂತಿಗೃಹ, ಅರಮನೆ ರಸ್ತೆ, ಬೆಂಗಳೂರು–560 001

ಗುರಿ, ನೀತಿ, ನಿಯಮಗಳು ಮತ್ತು ಸಂಘಟನೆ, ಎ.ಪಿ.ಆರ್.ಓ. ಭಾಗ-2


| | | |
|---|---|---|
| ಪ್ರಕಾಶಕರು | : | ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ<br>ರಾಜ್ಯ ಕೇಂದ್ರ ಕಛೇರಿ<br>ನಂ. 39, 'ಶಾಂತಿ ಗೃಹ', ಅರಮನೆ ರಸ್ತೆ<br>ಬೆಂಗಳೂರು-560 001.<br>info@bsgkarnataka.org |
| ಪ್ರಥಮ ಮುದ್ರಣ | : | ಜುಲೈ 2005 |
| ದ್ವಿತೀಯ ಮುದ್ರಣ | : | ಮಾರ್ಚ್ 2008 |
| ತೃತೀಯ ಮುದ್ರಣ | : | ಏಪ್ರಿಲ್ 2013 |
| ನಾಲ್ಕನೆಯ ಮುದ್ರಣ | : | 2018 |
| ಐದನೆಯ ಮುದ್ರಣ | : | 2021 |
| ಆರನೆಯ ಮುದ್ರಣ | : | 2024 |
| ಹಕ್ಕುಗಳು | : | ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ |
| ಪ್ರತಿಗಳು | : | 1,000 |
| ಪುಟಗಳು | : | x+126=136 |
| ಬೆಲೆ | : | ರೂ.40/- |

ಮುದ್ರಣ :
ಸತ್ಯಶ್ರೀ
ಪ್ರಿಂಟರ್ಸ್ ಪ್ರೈ. ಲಿ.
ಬೆಂಗಳೂರು-26
ದೂ : 080-2674 8811
satyasriprn@gmail.com

# ಮುನ್ನುಡಿ

ಸ್ಕೌಟ್ ಗೈಡ್ ಚಳವಳಿಯು ಅಂತಾರಾಷ್ಟ್ರೀಯ ಯುವ ಸಂಘಟನೆ. ಮೂರು ಕೋಟಿ ಮೀರಿ ಸಮವಸ್ತ್ರಧಾರಿಗಳುಳ್ಳ ಈ ಚಳವಳಿ ಪ್ರಪಂಚದ 216 ರಾಷ್ಟ್ರಗಳಲ್ಲಿ ತನ್ನ ಅಸ್ತಿತ್ವವನ್ನು ಹೊಂದಿದೆ.

ಯುವಸಮುದಾಯಕ್ಕೆ ಸಾಮಾಜಿಕ ಹೊಣೆಗಾರಿಕೆ ಹಾಗೂ ಜೀವನ ಮೌಲ್ಯಗಳ ಬೆಳವಣಿಗೆಗೆ ಸಂಪೂರ್ಣ ಸಹಕಾರಿಯಾಗಿರುವ ಸ್ಕೌಟ್/ಗೈಡ್ ಚಳವಳಿಯನ್ನು ಉತ್ತಮ ರೀತಿಯಲ್ಲಿ ಮುನ್ನಡೆಸಿ ಬೆಳೆಸಬೇಕೆಂಬುದೇ ಚಳವಳಿಯಲ್ಲಿ ತೊಡಗಿಸಿಕೊಂಡಿರುವ ಲಕ್ಷಾಂತರ ಕಾರ್ಯಕರ್ತರುಗಳ ಹೆಬ್ಬಯಕೆ.

ರಾಜ್ಯದ ಎಲ್ಲಾ ಶಾಲೆ ಕಾಲೇಜುಗಳಲ್ಲಿ ತನ್ನ ಘಟಕಗಳನ್ನು ಹೊಂದುವ ಉದ್ದೇಶವು ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲ ಹಂತದ ಕಾರ್ಯಕರ್ತರುಗಳು ಹಾಗೂ ಪದಾಧಿಕಾರಿಗಳದ್ದಾಗಿದೆ. ಈ ಕಾರ್ಯ ಯೋಜನೆಯನ್ನು ಅನುಷ್ಠಾನಗೊಳಿಸುವ ಹಲವಾರು ಅಂಶಗಳಲ್ಲಿ ಚಳವಳಿಯ ಎಲ್ಲಾ ವಿಭಾಗಗಳ ಪ್ರಕಟಣೆಗಳನ್ನೂ ಕನ್ನಡದಲ್ಲಿ ರಚಿಸುವ, ಭಾಷಾಂತರಿಸುವ ಹಾಗೂ ಪರಿಷ್ಕರಿಸುವ ಕಾರ್ಯವೂ ಒಂದು. ಯುವಸಮುದಾಯಕ್ಕೆ ಹಾಗೂ ಚಳವಳಿಯಲ್ಲಿ ತೊಡಗಿಸಿಕೊಂಡಿರುವ ಸಹಸ್ರಾರು ಕಬ್ ಮಾಸ್ಟರುಗಳು, ಸ್ಕೌಟ್ ಮಾಸ್ಟರ್‌ಗಳು, ಫ್ಲಾಕ್ ಲೀಡರುಗಳು, ಗೈಡ್ ಕ್ಯಾಪ್ಟನ್‌ಗಳು ಹಾಗೂ ರೋವರ್-ರೇಂಜರ್ ಲೀಡರುಗಳಿಗೆ ಅವರುಗಳ ಕಾರ್ಯಕ್ಷಮತೆಯ ಬೆಳವಣಿಗೆಯಲ್ಲಿ ಅನುಕೂಲವಾಗುವ, ಸ್ಕೌಟ್/ಗೈಡ್ ಚಳವಳಿಯ ವಿವಿಧ ವಿಭಾಗಗಳ ಮತ್ತು ಹಂತಗಳ ಮಾಹಿತಿ, ನೀತಿ ನಿಯಮಾವಳಿಗಳು ಹಾಗೂ ಬೋಧನಾ ಸಾಮರ್ಥ್ಯಕ್ಕೆ ಅನುಕೂಲಕರವಾಗುವಂತಹ ಕರಪತ್ರಗಳು ಮತ್ತು ಪುಸ್ತಕಗಳನ್ನು ಕನ್ನಡದಲ್ಲಿ ಪ್ರಕಟಿಸಲು ತೀರ್ಮಾನಿಸಿ ಅದರಂತೆ ಸತತವಾಗಿ ಪ್ರಯತ್ನ ಮಾಡುತ್ತಿರಲಾಗಿದೆ.

ಈ ದಿಸೆಯಲ್ಲಿ ಸ್ಕೌಟ್ ವಿಭಾಗದ ನಿಯಮಾವಳಿ ಪುಸ್ತಕವನ್ನು ಹೊರತರುವುದು ಒಂದು ಮಹತ್ವಪೂರ್ಣ ಹೆಜ್ಜೆಯಾಗಿದ್ದು. ಇದೀಗ ಅದರ ಐದನೇ ಆವೃತ್ತಿಯು ಹೊರಬರುತ್ತಿರುವುದು ಸಂತೋಷದಾಯಕ ವಿಷಯವಾಗಿದೆ.

ಸ್ಕೌಟ್ ವಿಭಾಗದ ಹಿರಿಯ ತರಬೇತುದಾರರುಗಳಾದ ಶ್ರೀ ಎನ್. ಶ್ರೀನಿವಾಸನ್ ಮತ್ತು ಶ್ರೀ ಆರ್. ಚಂದ್ರಶೇಖರನ್ ಇವರುಗಳು ಸ್ಕೌಟ್ ವಿಭಾಗದ ಗುರಿ ಉದ್ದೇಶ, ನಿಯಮಗಳು ಹಾಗೂ ಸಂವಿಧಾನದ ವಿವರಣೆಯನ್ನು ಕನ್ನಡಕ್ಕೆ ಭಾಷಾಂತರಿಸಿ, ಇತ್ತೀಚಿನ ತಿದ್ದುಪಡಿಗಳನ್ನು ಅಳವಡಿಸಿ, ನಾಲ್ಕನೆಯ ಬಾರಿ ಪರಿಷ್ಕರಿಸಿ ಮುದ್ರಣಕ್ಕೆ ಸಿದ್ಧಪಡಿಸಿರುತ್ತಾರೆ. ಸ್ಕೌಟ್ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಳನಾಯಕರುಗಳಿಗೆ ಉಪಯುಕ್ತವಾದ ಅಂಶಗಳನ್ನು ವಿವರಿಸಿರುತ್ತಾರೆ. ಇವರುಗಳಿಗೆ ವಿಶೇಷ ಅಭಿನಂದನೆ ಸಲ್ಲಿಸುತ್ತೇನೆ.

ಈ ಪುಸ್ತಕವನ್ನು ಪ್ರಕಟಿಸಲು ನೆರವು ನೀಡಿರುವ ರಾಜ್ಯ ಸಂಸ್ಥೆಯ ಪ್ರಕಟಣಾ ಸಮಿತಿಯ ಅಧ್ಯಕ್ಷರು ಹಾಗೂ ಹಿರಿಯ ಸಾಹಿತಿಗಳಾದ ಶ್ರೀ ಗೊ.ರು. ಚನ್ನಬಸಪ್ಪ ಅವರಿಗೆ, ರಾಜ್ಯದ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರಿಗೂ ಮತ್ತು ಪ್ರಕಟಣಾ ಸಮಿತಿಯ ಸದಸ್ಯರುಗಳಿಗೆ, ರಾಜ್ಯ ಕಾರ್ಯಕಾರಿ ಸಮಿತಿಗೆ, ಅಂದವಾಗಿ ಮುದ್ರಿಸಿಕೊಟ್ಟಿರುವ ಸತ್ಯಶ್ರೀ ಪ್ರಿಂಟರ್ಸ್ (ಪ್ರೈ.) ಲಿ., ಇವರಿಗೆ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

**ಪಿ.ಜಿ.ಆರ್. ಸಿಂಧ್ಯ**
**ರಾಜ್ಯ ಮುಖ್ಯ ಆಯುಕ್ತರು**

# ಆಶಯ ನುಡಿ

ಸರ್ಕಾರದ ಆಡಳಿತವಿರಲಿ, ಸಾಮಾಜಿಕ ವ್ಯವಸ್ಥೆಯಿರಲಿ, ಸಾಂಸ್ಥಿಕ ನಿರ್ವಹಣೆ ಇರಲಿ – ನಿರ್ವಾಹಕರಿಗೆ ಅವುಗಳ ಗುರಿ, ನೀತಿ, ನಿಯಮ ಮತ್ತು ಸಂಘಟನೆಗಳ ಬಗೆಗೆ ಪೂರ್ಣವಾದ ಜ್ಞಾನವಿರಬೇಕು. ಅಂತಹ ಜ್ಞಾನವಿಲ್ಲದೆ ಇದ್ದಾಗ ನಿರ್ವಹಣೆಯಲ್ಲಿ ಕುಂದು–ಕೊರತೆಗಳು ಕಾಣಿಸಿಕೊಳ್ಳುತ್ತವೆ. ಅದರಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್ ನಂತಹ ಸ್ವಯಂ ಸೇವಾ ಸಂಸ್ಥೆಗಳ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವ ವಿವಿಧ ಹಂತದ ಶಿಕ್ಷಕರು ಮತ್ತು ತರಬೇತುದಾರರಿಗಂತೂ ಈ ಅರಿವು ಅತ್ಯಂತ ಅಗತ್ಯವಾಗುತ್ತದೆ.

ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಕ್ಷೇತ್ರ ಕಾರ್ಯನಿರ್ವಾಹಕರಿಗೆ ಅಗತ್ಯವಾದ ಮಾಹಿತಿಜ್ಞಾನ ಒದಗಿಸುವ ಆಶಯದಿಂದ ನಾನಾ ರೂಪದ ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಶೈಕ್ಷಣಿಕ ಮಹತ್ವದ ಈ ಪುಸ್ತಕಗಳನ್ನು ಚಳವಳಿಯಲ್ಲಿ ಸುದೀರ್ಘ ಅನುಭವವಿರುವ ಕ್ಷೇತ್ರ ತಜ್ಞರೇ ರಚಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಸಂಸ್ಥೆಯ ಪ್ರಕಟಣೆಗಳನ್ನು ಕನ್ನಡಕ್ಕೆ ಅನುವಾದಿಸಿಕೊಡಲಾಗುತ್ತಿದೆ.

ಪ್ರಸ್ತುತ "ಗುರಿ, ನೀತಿ, ನಿಯಮ ಮತ್ತು ಸಂಘಟನೆ" ಕೃತಿ ಸ್ಕೌಟ್ ವಿಭಾಗಕ್ಕೆ ಸಂಬಂಧಿಸಿದ್ದು, ಇದನ್ನು ಮೂಲ ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಿಸಿ ಪರಿಷ್ಕರಿಸಿಕೊಟ್ಟಿರುವ ಆತ್ಮೀಯರಾದ ಶ್ರೀ ಎನ್. ಶ್ರೀನಿವಾಸನ್ ಮತ್ತು ಶ್ರೀ ರಾ. ಚಂದ್ರಶೇಖರನ್ ಅವರನ್ನು ಅಭಿನಂದಿಸುತ್ತೇನೆ.

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಘನತೆ–ಗೌರವಗಳ ದೃಷ್ಟಿಯಿಂದ ಚಳವಳಿಯ ಬಂಧುಗಳೆಲ್ಲ ಸಂಸ್ಥೆಯ ಪ್ರಕಟಣೆಗಳನ್ನು ಶ್ರದ್ಧೆಯಿಂದ ಓದಿ ಅವುಗಳ ಪ್ರಯೋಜನ ಪಡೆದುಕೊಳ್ಳುವಂತಾಗಲಿ ಎಂದು ಆಶಿಸುತ್ತೇನೆ.

**ಗೊ.ರು. ಚನ್ನಬಸಪ್ಪ**
**ಅಧ್ಯಕ್ಷರು, ಪ್ರಕಟಣೆಗಳ ಸಮಿತಿ**

# ನಮ್ಮ ಮಾತು

ಯಾವಾಗಲೂ ಹಿರಿಯರ ಆದರ್ಶ ಮತ್ತು ಮಾರ್ಗದರ್ಶನಗಳು ಕಿರಿಯರ ಮೇಲೆ ಪ್ರಭಾವ ಬೀರುತ್ತವೆ. ಅವರ ಜೀವನವನ್ನು ಸನ್ಮಾರ್ಗದಲ್ಲಿ ರೂಪಿಸಿಕೊಳ್ಳಲು ಮತ್ತು ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಸಹಾಯಕವಾಗುತ್ತವೆ. ಅಂತಹ ಸೌಭಾಗ್ಯವು ದೊರೆತದ್ದು ನಮ್ಮ ಅದೃಷ್ಟವೆಂದು ಭಾವಿಸುತ್ತೇವೆ.

ಕರ್ನಾಟಕ ರಾಜ್ಯದ ಬಿ.ಪಿ. ಎಂದೇ ಪ್ರಸಿದ್ಧರಾಗಿದ್ದ ನನ್ನ ಪೂಜ್ಯ ತಂದೆಯವರಾದ ಮ.ಹ.ರಾ.ಯ (ಎಂ.ಹೆಚ್.ಆರ್.) ರಿಂದ ಪರಂಪರಾನುಗತ ವೆಂಬಂತೆ ನನ್ನಲ್ಲಿ ಸ್ಕೌಟಿಂಗ್ ಮತ್ತು ಬರವಣಿಗೆ ರೂಢಿಸಿಕೊಂಡಿತು. ಹಾಗಾಗಿ, ರಾಜ್ಯ ಮುಖ್ಯ ಆಯುಕ್ತರಾಗಿದ್ದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರ ಉತ್ತೇಜನಗಳಿಂದ, ರಾಜ್ಯ ಸ್ಥಾನಿಕ ಆಯುಕ್ತನಾಗಿ, ಪ್ರಕಟಣಾ ವಿಭಾಗದಲ್ಲಿ ನೇಮಕ ಗೊಂಡುದೂ, ರಾಜ್ಯ ಸ್ಕೌಟ್ ಗೈಡ್ ಮಾಸಪತ್ರಿಕೆಯ ಉಪಸಂಪಾದಕನಾಗಿ ಕೆಲಸ ಮಾಡುತ್ತಿದ್ದುದೂ, **"ಬಾಲಕರಿಗಾಗಿ ಸ್ಕೌಟಿಂಗ್"**ನಿಂದ ಹಿಡಿದು **"ಜೀವನ ಸಫಲತೆಯ ಮಾರ್ಗ"**ದ ವರೆಗೆ ಹಲವಾರು ಸ್ಕೌಟ್ ಗ್ರಂಥಗಳ ಅನುವಾದಕನಾಗಿ, ಪುಸ್ತಿಕೆಗಳ ಲೇಖಕನಾಗಿ ಸೇವೆಸಲ್ಲಿಸಲು ಸಾಧ್ಯವಾದದ್ದೂ ನನ್ನ ಸೌಭಾಗ್ಯ. ಇದೀಗ ಗುರಿ, ನೀತಿ, ನಿಯಮ, ಸಂಘಟನೆ-2 (ಸ್ಕೌಟ್ ವಿಭಾಗ) ಪುಸ್ತಕದ ಇತ್ತೀಚಿನ ಬದಲಾವಣೆಗಳನ್ನು ಅಳವಡಿಸಿ, ಐದನೇ ಮುದ್ರಣಕ್ಕೆ ಸಿದ್ಧಪಡಿಸುವ ಕಾರ್ಯವು ನನ್ನ ಕೈಗೆ ಬಂದದ್ದನ್ನು ಮತ್ತೊಂದು ಸೇವಾಭಾಗ್ಯವೆಂದೇ ಭಾವಿಸುತ್ತೇನೆ.

ಈ ಅವಕಾಶ ಒದಗಿಸಿಕೊಟ್ಟ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರಿಗೆ ನನ್ನ ಕೃತಜ್ಞತೆಗಳು.

ಬೆಂಗಳೂರು

**ರಾ. ಚಂದ್ರಶೇಖರನ್**
**ಮಾಜಿ ಸ್ಥಾನಿಕ ಆಯುಕ್ತರು (ಪ್ರಕಟಣೆಗಳು)**

ಆನೇಕಲ್‌ನ ಪ್ರಖ್ಯಾತ ಸ್ಕೌಟ್ ಮಾಸ್ಟರ್ ಶ್ರೀ ನಾರಾಯಣ ಐಯ್ಯಂಗಾರ್ ಅವರ ಪುತ್ರನಾದ ಎನ್. ಶ್ರೀನಿವಾಸನ್, ನಾನು ಬಾಲ್ಯದಲ್ಲಿ ಸ್ಕೌಟ್ ಆಗಿದ್ದುದಲ್ಲದೆ ನನ್ನ ಪೂಜ್ಯ ತಂದೆಯುವರು ಬರವಣಿಗೆಯು ಹವ್ಯಾಸದಲ್ಲಿ ನಾನು ತೊಡಗಿಸಿಕೊಳ್ಳಲು ಸಹಾಯಕವಾದದ್ದು ನನ್ನ ಭಾಗ್ಯವೇ ಸರಿ. ಮುಂದೆ ನಾನು ಎಲ್.ಟಿ.(ಎಸ್) ಆದದ್ದೂ, ನನ್ನ ಗುರಿ, ನೀತಿ, ನಿಯಮ, ಸಂಘಟನೆ ಭಾಗ-1 (ಎಪಿಆರ್‌ಒ ಭಾಗ-1)ರ ಅನುವಾದ, ಇದೀಗ ಭಾಗ-2 ಸ್ಕೌಟ್ ವಿಭಾಗದ ಅನುವಾದ ಪರಿಷ್ಕರಣೆ ಐದನೇ ಬಾರಿಗೆ ನನ್ನ ಕೈಗೆ ಬಂದದ್ದೂ ನನ್ನ ಅದೃಷ್ಟ.

ಈ ಅವಕಾಶ ಒದಗಿಸಿಕೊಟ್ಟ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರಿಗೆ ನನ್ನ ಕೃತಜ್ಞತೆಗಳು

ಬೆಂಗಳೂರು

**ಎನ್. ಶ್ರೀನಿವಾಸನ್,** ಎಲ್.ಟಿ. (ಸ್ಕೌಟ್ಸ್)
**ಸಹಾಯಕ ರಾಜ್ಯ ಆಯುಕ್ತರು (ಕಾರ್ಯಕ್ರಮ ಮತ್ತು ತರಬೇತಿ)**

# ವಿಷಯಸೂಚಿಕೆ



## ಆಧಾರ ಗ್ರಂಥಗಳು


1. ಆಂಗ್ಲ ಎ.ಪಿ.ಆರ್.ಓ ಭಾಗ–2 (ರಾಷ್ಟ್ರ ಕಛೇರಿ ಪ್ರಕಟಣೆ)
2. ಕನ್ನಡ–ಇಂಗ್ಲೀಷ್ ನಿಘಂಟು
3. ಬಾಲಕರಿಗಾಗಿ ಸ್ಕೌಟಿಂಗ್
4. ರಾಷ್ಟ್ರ ನಿರ್ಮಾಣಕಾರ್ಯದಲ್ಲಿ ಯುವಕರು

# ಕಾರ್ಯಕ್ರಮಗಳು

ಬಾಲಕನು ಸ್ಕೌಟ್ ಕಾರ್ಯಕ್ರಮವನ್ನು ಪೂರ್ತಿಗೊಳಿಸುವ ವೇಳೆಗೆ, ಅವನು ಈ ಕೆಳಕಾಣಿಸಿರುವಂತೆ ಶಕ್ತನಾಗಿರುತ್ತಾನೆ –

1. ಆರೋಗ್ಯವಂತನಾಗಿಯೂ, ಸಮರ್ಥನಾಗಿಯೂ ಬಾಳಲು ತನ್ನ ಸಚ್ಚಾರಿತ್ರ್ಯವನ್ನು ಬೆಳೆಸಿಕೊಳ್ಳುತ್ತಾನೆ.
2. ಉತ್ತಮ ಪೌರತ್ವ ಮೂಲ ತತ್ವಗಳನ್ನು ಅರಿತವನಾಗಿ, ಅನುಸರಿಸುತ್ತಾನೆ.
3. ಸ್ವಾವಲಂಬಿಯಾಗಲೂ, ಇತರರಿಗೆ ಸಹಾಯಕನಾಗಿರಲೂ ಅವಶ್ಯಕವಾದ ಕೌಶಲಗಳನ್ನು ಅಭ್ಯಾಸಮಾಡುತ್ತಾ, ಅಭಿವೃದ್ಧಿಪಡಿಸಿಕೊಳ್ಳುತ್ತಾ, ಇರುತ್ತಾನೆ.
4. ಚಟುವಟಿಕೆಗಳಲ್ಲಿ, ಸವಾಲುಗಳಲ್ಲಿ ಸಾಮೂಹಿಕವಾಗಿ ಭಾಗವಹಿಸುತ್ತಾನೆ. ಇದರಿಂದ ಅವನ ಸಮಗ್ರ ಬೆಳವಣಿಗೆಗೆ ಸಹಾಯವಾಗುತ್ತದೆ.
5. ತನ್ನ ಅಂತಸ್ಥ ಸಾಮರ್ಥ್ಯವನ್ನು ತಿಳಿದವನಾಗಿ, ಅದನ್ನು ಸಮುದಾಯ ಸೇವೆಗಾಗಿ ಉಪಯೋಗಿಸುತ್ತಾನೆ.
6. ತನ್ನ ಅವಲೋಕನ ಶಕ್ತಿಯನ್ನು ಅಭಿವೃದ್ಧಿ ಪಡಿಸಿಕೊಂಡು, ಪ್ರಕೃತಿ ಅದ್ಭುತಗಳನ್ನು ಗೌರವಿಸುತ್ತಾನೆ ಮತ್ತು ಪ್ರಕೃತಿಯ ಆರಾಧಕನಾಗುತ್ತಾನೆ ಹಾಗೂ ಅದನ್ನು ಪಾಲನೆ ಮಾಡುತ್ತಾನೆ.
7. ಇತರರಿಗೆ ಉಪಯೋಗವಾಗುವಂತೆ ನಡೆದುಕೊಳ್ಳುತ್ತಾನೆ.
8. ಸಾರ್ವಜನಿಕ ಸ್ವತ್ತನ್ನು ತನ್ನ ಸ್ವತ್ತೆಂದು ಭಾವಿಸುತ್ತಾನೆ ಮತ್ತು ಅದನ್ನು ಕಾಪಾಡಲು ಪ್ರಯತ್ನಿಸುತ್ತಾನೆ.
9. ತನ್ನನ್ನು ಸಮುದಾಯದ ಅಂತರ್ಭಾಗವಾಗಿ ಗುರುತಿಸಿಕೊಂಡು, ದೇಶಕ್ಕೆ ಮಾಡಬೇಕಾದ ತನ್ನ ಕರ್ತವ್ಯವನ್ನು ಅರಿತವನಾಗುತ್ತಾನೆ.
10. ಮುಂಬರುವ ಸ್ಕೌಟ್ ಕೌಶಲಗಳನ್ನು ಅಭಿವೃದ್ಧಿಪಡಿಸಿಕೊಂಡು, ಸಾಹಸ ಚಟುವಟಿಕೆಗಳನ್ನು ಕೈಗೊಳ್ಳುತ್ತಾನೆ ಮತ್ತು ಸಾಹಸ ಕಾರ್ಯಗಳ ಬಗ್ಗೆ ಒಲವುಳ್ಳವನಾಗುತ್ತಾನೆ.
11. ನಮ್ಮ ರಾಷ್ಟ್ರದ ಪರಂಪರೆ ಮತ್ತು ಸಂಸ್ಕೃತಿಗಳನ್ನು ತಿಳಿದವನಾಗುತ್ತಾನೆ ಮತ್ತು ಅವುಗಳನ್ನು ಕಾಪಾಡುವ ಛಲವುಳ್ಳವನಾಗುತ್ತಾನೆ.
12. ಪ್ರಾಕೃತಿಕ ಮೂಲ ಸಂಪತ್ತನ್ನು ಸಂರಕ್ಷಿಸಲು, ವೈಯಕ್ತಿಕ ಹಾಗೂ ಸಾಮೂಹಿಕ ಅಭ್ಯಾಸಗಳನ್ನು ಕೈಗೊಳ್ಳುತ್ತಾನೆ ಮತ್ತು ಈ ದಿಕ್ಕಿನಲ್ಲಿ ಇತರರಿಗೆ ಶಿಕ್ಷಣ ನೀಡಲು ತಯಾರಾಗುತ್ತಾನೆ.
13. ಕ್ರಿಯಾತ್ಮಕ ನಾಯಕನಾಗುವ ಎಲ್ಲಾ ಗುಣಗಳನ್ನೂ ರೂಢಿಸಿಕೊಳ್ಳುತ್ತಾನೆ ಮತ್ತು ತನಗೆ ದೊರಕುವ ನಾಯಕತ್ವದ ಎಲ್ಲಾ ಜವಾಬ್ದಾರಿಗಳನ್ನು ಪರಿಣಾಮಕಾರಿಯಾಗಿ ತನ್ನ ಶಕ್ತ್ಯಾನುಸಾರ ನಿರ್ವಹಿಸುತ್ತಾನೆ.
14. ತನ್ನ ದೇಶ ಮತ್ತು ಜನರ ಬಗ್ಗೆ ಅಧ್ಯಯನ ಮಾಡಿ, ರಾಷ್ಟ್ರೀಯ ಸಮೈಕ್ಯತೆಗಾಗಿ ತನ್ನ ಪಾತ್ರವನ್ನು ವಹಿಸುತ್ತಾನೆ.

# ಅಧ್ಯಾಯ–1
## (ಮೂಲದಲ್ಲಿ ಅಧ್ಯಾಯ 2)

# ಸ್ಕೌಟ್ ವಿಭಾಗ

### 1. ಸ್ಕೌಟ್



10 ವರ್ಷ ಪೂರ್ಣಗೊಂಡ ಆದರೆ 17 ವರ್ಷ ಪೂರ್ಣಗೊಳ್ಳದ, ಭಾರತದ ಪ್ರಜೆಯಾದ ಒಬ್ಬ ಬಾಲಕನು ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆಗೆ ಬದ್ಧನಾದರೆ ಅವನು ಸ್ಕೌಟ್ ಆಗಲು ಅರ್ಹತೆ ಪಡೆಯುತ್ತಾನೆ. ಮತ್ತು ಸ್ಕೌಟ್ ದಳದ ಸದಸ್ಯನಾಗುತ್ತಾನೆ. ಒಬ್ಬ ಸ್ಕೌಟ್ ಶಾಲೆಯಲ್ಲೇ ಮುಂದುವರಿದರೆ ಅವನಿಗೆ 18 ವರ್ಷವಯಸ್ಸಿನವರೆಗೆ ದಳದಲ್ಲಿ ಉಳಿಯುವ ಅವಕಾಶ ಕೊಡಬೇಕು.

### 2. ಸ್ಕೌಟ್ ದಳ

i. ಒಂದು ಸ್ಕೌಟ್ ದಳವು 12ಕ್ಕೆ ಕಡಿಮೆಯಿಲ್ಲದಂತೆ, 32ಕ್ಕೆ ಹೆಚ್ಚಾಗದಂತೆ ಸ್ಕೌಟ್‌ಗಳನ್ನು ಹೊಂದಿರುತ್ತದೆ.

ii. ಒಂದು ಸ್ಕೌಟ್ ಗುಂಪು ಎಂದರೆ ಮರಿಗಳ ಹಿಂಡು, ಸ್ಕೌಟ್ ದಳ ಮತ್ತು ರೋವರ್ ತಂಡಗಳನ್ನು ಹೊಂದಿದ ಒಂದು ಘಟಕವಾಗಿರುತ್ತದೆ. ಆದರೆ ಎಲ್ಲಿ ಆ ರೀತಿಯ ಗುಂಪು ಇರುವುದಿಲ್ಲವೋ ಅಲ್ಲಿ ಒಂದು ಸ್ಕೌಟ್ ದಳವನ್ನೇ ಗುಂಪನ್ನಾಗಿ ಪರಿಗಣಿಸಬೇಕು.

iii. ಪ್ರತಿಯೊಂದು ಸ್ಕೌಟ್ ದಳವೂ ನಿರ್ದೇಶಿತ ನಿಯಮದ ಪ್ರಕಾರ ನೋಂದಾಯಿಸಲ್ಪಡಬೇಕು.

iv. ಪ್ರತಿ ಸ್ಕೌಟ್ ದಳವೂ ಒಂದು ಹೆಸರನ್ನು ಹೊಂದಿರಬೇಕು. ಎಲ್ಲಿ ದಳವು ಗುಂಪಿನ ಒಂದು ಘಟಕವಾಗಿರುತ್ತದೋ ಅಲ್ಲಿ ಅದು ಗುಂಪಿನ ಹೆಸರನ್ನೇ ಹೊಂದಿರುತ್ತದೆ. ಸಂಬಂಧಿಸಿದ ಸ್ಥಳದ, ಅಥವಾ ಶಾಲೆಯ ಅಥವಾ ಭಾರತದ ಪ್ರಖ್ಯಾತ ವ್ಯಕ್ತಿ ನಾಯಕರ ಹೆಸರನ್ನೂ ಗುಂಪಿಗೆ ಇಡಬಹುದು. ಸ್ಥಳೀಯ ಸಂಸ್ಥೆ ಅಥವ ಜಿಲ್ಲಾ ಸಂಸ್ಥೆಯವರು ನೀಡಿದ ಕ್ರಮಸಂಖ್ಯೆಯನ್ನು ಗುಂಪು ಹೊಂದಿರಬೇಕು.

## 3. ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರ್*

i. ಪ್ರತಿಯೊಂದು ದಳಕ್ಕೂ ಒಬ್ಬ ಸ್ಕೌಟ್ ಮಾಸ್ಟರ್ ಇರಬೇಕು. ಒಂದು ದಳಕ್ಕೆ ಒಬ್ಬರು ಅಥವಾ ಹೆಚ್ಚು ಎಂದರೆ 8 ಸ್ಕೌಟುಗಳಿಗೆ ಒಬ್ಬರಂತೆ ಸಹಾಯಕ ಸ್ಕೌಟ್ ಮಾಸ್ಟರ್‌ಗಳು ಇರಬಹುದು.

ii. ಗುಂಪು ಇರುವಲ್ಲಿ ಗುಂಪಿನ ನಾಯಕನ ಮೇಲ್ವಿಚಾರಣೆಯಲ್ಲಿ ಸ್ಕೌಟ್ ಮಾಸ್ಟರ್ ಹಾಗೂ ಸಹಾಯಕ ಸ್ಕೌಟ್ ಮಾಸ್ಟರುಗಳು ಕಾರ್ಯ ನಿರ್ವಹಿಸುವರು. ದಳದ ವ್ಯವಹಾರಗಳ ನಿರ್ವಹಣೆಗೆ ಸ್ಕೌಟ್ ಮಾಸ್ಟರ್ ಜವಾಬ್ದಾರನಾಗಿರುತ್ತಾನೆ. ಆದರೂ ಶಿಸ್ತು, ಆಡಳಿತೆ ಮತ್ತು ಹಣಕಾಸಿನ ವಿಷಯಗಳನ್ನು ಗೌರವಾನ್ವಿತ ಸಭೆಗೆ (Court of Honour) ನಿಯೋಜಿಸ –ಬೇಕು. ಸ್ಕೌಟ್ ಮಾಸ್ಟರನಿಗೆ ಸಹಾಯಕ ಸ್ಕೌಟ್ ಮಾಸ್ಟರ್ ಸಹಕರಿಸಬೇಕು.

iii. ಸಂಬಂಧಪಟ್ಟ ಸ್ಥಳೀಯ ಸಂಸ್ಥೆ ಅಥವಾ ಜಿಲ್ಲಾ ಸಂಸ್ಥೆ ಮತ್ತು ಸಂಬಂಧ ಪಟ್ಟ ಸಹಾಯಕ ಜಿಲ್ಲಾ ಆಯುಕ್ತರ ಹಾಗೂ ಜಿಲ್ಲಾ ಆಯುಕ್ತರು ಮತ್ತು ಜಿಲ್ಲಾ ಮುಖ್ಯ ಆಯುಕ್ತರ ಶಿಫಾರಸಿನ ಮೇರೆಗೆ, ರಾಜ್ಯ ಮುಖ್ಯ ಆಯುಕ್ತರು ಸ್ಕೌಟ್ ಮಾಸ್ಟರ್, ಮಹಿಳಾ ಸ್ಕೌಟ್ ಮಾಸ್ಟರ್, ಸಹಾಯಕ ಸ್ಕೌಟ್ ಮಾಸ್ಟರ್, ಸಹಾಯಕ ಮಹಿಳಾ ಸ್ಕೌಟ್ ಮಾಸ್ಟರಗಳನ್ನು ನೇಮಿಸುತ್ತಾರೆ.

iv. ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರ್‌ಗಳ ನೇಮಕವಾದ ನಂತರ ಅವರಿಗೆ ಸನ್ನದು (warrant) ನೀಡಲಾಗುತ್ತದೆ.

## 4. ಸ್ಕೌಟ್ ಮಾಸ್ಟರ್, ಮಹಿಳಾ ಸ್ಕೌಟ್ ಮಾಸ್ಟರ್, ಸಹಾಯಕ ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಮಹಿಳಾ ಸ್ಕೌಟ್ ಅರ್ಹತೆಗಳು

i. ಅ. 21 ವರ್ಷ ಪೂರೈಸಿದ ವ್ಯಕ್ತಿಯು ಸ್ಕೌಟ್ ಮಾಸ್ಟರರಾಗಿ ನೇಮಕಗೊಳ್ಳಲು ಅರ್ಹರು.

ಆ. 18 ವರ್ಷ ಪೂರೈಸಿದ ವ್ಯಕ್ತಿಯು ಸಹಾಯಕ ಸ್ಕೌಟ್ ಮಾಸ್ಟರರಾಗಿ ನೇಮಕಗೊಳ್ಳಲು ಅರ್ಹರು.

ii. ಆತನು / ಅವಳು ಇಂಟರ್‌ಮೀಡಿಯೇಟ್ (10+2) ಅಥವ ತತ್ಸಮಾನ ಪ್ರಮಾಣ ಪತ್ರ ಹೊಂದಿರಬೇಕು. ಅದಾಗ್ಯೂ ಸಂಬಂಧಪಟ್ಟ ಸಹಾಯಕ ಜಿಲ್ಲಾ ಆಯುಕ್ತರು, ಜಿಲ್ಲಾ ಆಯುಕ್ತರು ಮತ್ತು ಜಿಲ್ಲಾ ಮುಖ್ಯ ಆಯುಕ್ತರ ಶಿಫಾರಸ್ಸಿನ ಮೇರೆಗೆ ವಿಶೇಷ ಸಂದರ್ಭಗಳಲ್ಲಿ ರಾಜ್ಯ ಮುಖ್ಯ ಆಯುಕ್ತರು, ವಿದ್ಯಾರ್ಹತೆಯ ವಿನಾಯಿತಿಯನ್ನು ನೀಡಬಹುದು.

iii. ಆತನ / ಅವಳು ಉತ್ತಮ ಚಾರಿತ್ರ್ಯ, ನಡೆತೆಯುಳ್ಳ ವ್ಯಕ್ತಿಯಾಗಿರಬೇಕು. ಮತ್ತು ಪೂರ್ವ ಚರಿತ್ರೆಯು ಸಮರ್ಪಕವಾಗಿರಬೇಕು.

---

* ಸ್ಕೌಟ್ ಮಾಸ್ಟರ್ ಪದ ಬರುವ ಕಡೆಯಲೆಲ್ಲಾ ಮಹಿಳಾ ಸ್ಕೌಟ್ ಮಾಸ್ಟರ್ ಎಂದು ಓದಿಕೊಳ್ಳಬಹುದು.

iv. ಆತನಿಗೆ / ಅವಳಿಗೆ ಸ್ಕೌಟ್ ಚಳುವಳಿ ಮತ್ತು ಅದರ ವಿಧಾನಗಳ ಬಗ್ಗೆ ಅರಿವು ಇರಬೇಕು. ಅದರಲ್ಲೂ ವಿಶೇಷವಾಗಿ ಸ್ಕೌಟ್ ಚಳುವಳಿಯ ಧಾರ್ಮಿಕ ಮತ್ತು ನೈತಿಕ ತಳಹದಿಯ ಬಗ್ಗೆ ಮೆಚ್ಚುಗೆ ಇರಬೇಕು ಮತ್ತು ತನ್ನ ಕಾರ್ಯದಲ್ಲಿ ಎ.ಪಿ.ಆರ್.ಓ.ವನ್ನು ಅನ್ವಯಿಸಿಕೊಳ್ಳುವ ಅರಿವಿರಬೇಕು.

v. ಆತನು / ಅವಳು ಯುವ ಬಾಲಕರೊಂದಿಗೆ ವ್ಯವಹರಿಸಲು ವಿಶೇಷ ಬುದ್ಧಿ ಸಾಮರ್ಥ್ಯದ ವ್ಯಕ್ತಿಯಾಗಿರಬೇಕು.

vi. ಆತನು / ಅವಳು ರಾಷ್ಟ್ರೀಯ ಸಂಸ್ಥೆಯು ನಿಗದಿಗೊಳಿಸಿದ ತರಬೇತಿ ಅವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿರಬೇಕು.

## 5. ಸ್ಕೌಟ್ ಮಾಸ್ಟರ್, ಸಹಾಯಕ ಸ್ಕೌಟ್ ಮಾಸ್ಟರರ ಸಮವಸ್ತ್ರ

i. **ಷರ್ಟ್:** ಮುಚ್ಚಳ ಸಹಿತವಾದ ಎರಡು ಜೇಬುಗಳನ್ನು ಮತ್ತು ಭುಜ ಪಟ್ಟಿಗಳನ್ನು ಹೊಂದಿರುವ ಅರ್ಧ ಅಥವಾ ಮೇಲಕ್ಕೆ ಮಡಿಸಿರುವ ತೋಳುಗಳುಳ್ಳ ಸ್ಟೀಲ್ ಗ್ರೇ (ಬೂದು) ಬಣ್ಣದ ಷರ್ಟ್. ಚಳಿಗಾಲದಲ್ಲಿ ತೋಳುಗಳನ್ನು ಕೆಳಕ್ಕೆ ಬಿಟ್ಟುಕೊಳ್ಳಬಹುದು.

ii. **ನಿಕ್ಕರ್ ಅಥವಾ ಪ್ಯಾಂಟ್:** ಸಾಗರ ನೀಲಿ ಬಣ್ಣದ ನಿಕ್ಕರ್ ಅಥವಾ ಪ್ಯಾಂಟ್ ಧರಿಸಬೇಕು.

iii. **ತಲೆಟೋಪಿ (ಬೆರ್ರೆ):** ರಾಷ್ಟ್ರೀಯ ಸಂಸ್ಥೆಯವರು ಒದಗಿಸಿರುವ ಅಧಿಕೃತ ಪದಕ ಸಹಿತವಾದ ಗಾಢನೀಲಿ ಬಣ್ಣದಟೋಪಿ. ಸಮಾರಂಭಗಳಲ್ಲಿ ಟೋಪಿಯು ಕಡ್ಡಾಯ. ಅಧಿಕೃತ ಪದಕ ಹೊಂದಿರುವ ಗಾಢನೀಲಿ ಬಣ್ಣದ ರುಮಾಲನ್ನು (ಟರ್ಬನ್) ಸಿಖ್ಖರು ಧರಿಸಬಹುದು.

iv. **ಸೊಂಟಪಟ್ಟಿ (ಬೆಲ್ಟ್):** ರಾಷ್ಟ್ರೀಯ ಸಂಸ್ಥೆಯವರು ಒದಗಿಸಿರುವ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಅಧಿಕೃತ ಬಕಲ್ ಉಳ್ಳ ಬೂದು ಬಣ್ಣದ ನೈಲೆಕ್ಸ್ ಬೆಲ್ಟ್ ಧರಿಸಬೇಕು.

v. **ಕಂಠವಸ್ತ್ರ (ಸ್ಕಾರ್ಫ್):** ಹಳದಿ, ಹಸಿರು ಮತ್ತು ನೇರಳೆ ಬಣ್ಣಗಳನ್ನು ಹೊರತುಪಡಿಸಿ, ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯಿಂದ ಅನುಮೋದಿಸಲ್ಪಟ್ಟ ಗುಂಪಿನ ಬಣ್ಣಹೊಂದಿದ ತ್ರಿಕೋನಾಕಾರದ ಕಂಠವಸ್ತ್ರವನ್ನು ಷರ್ಟಿನ ಕಂಠಪಟ್ಟಿ (ಕಾಲರ್) ಮತ್ತು ಭುಜಪಟ್ಟಿಗಳ ಮೇಲೆ ಕೊರಳ ಸುತ್ತ ಧರಿಸಬೇಕು. ಗಿಲ್‌ವೆಲ್ ವೋಗಲ್ ಹೊರತು ಪಡಿಸಿ ಅನ್ಯ ವೋಗಲ್ ಧರಿಸಬೇಕು. ಕಂಠವಸ್ತ್ರದ ಎರಡು ಬಾಹುಗಳ ಉದ್ದ ಕನಿಷ್ಠ 70 ಸೆಂ.ಮೀ. ಗರಿಷ್ಠ 90 ಸೆಂ.ಮೀ. ಆಗಿರಬೇಕು.

vi. **ಭುಜಪದಕ:** 6 ರಿಂದ 8 ಸೆಂ.ಮೀ. ಉದ್ದವಿರುವ 1.5 ಸೆಂ.ಮೀ. ಅಗಲದ ಬಿಳಿ ಓಸ್ನೆಲೆಯ ಮೇಲೆ ಕೆಂಪು ಅಕ್ಷರಗಳಿರುವ ಗುಂಪಿನ/ಜಿಲ್ಲೆಯ/ರಾಜ್ಯದ

ಹೆಸರಿರುವ, ಸಂಖ್ಯೆ ಇರುವ (ಐಚ್ಛಿಕ) ಸ್ವಲ್ಪ ಭಾಗಿದ ಭುಜ ಪದಕವನ್ನು ಎರಡೂ ಭುಜಗಳ ಹೊಲಿಗೆಯ ಕೆಳಭಾಗದಲ್ಲಿ ಧರಿಸಬೇಕು.

***ಸೂಚನೆ :*** ಸಾಗರ ಸ್ಕೌಟ್ ಮತ್ತು ವಾಯು ಸ್ಕೌಟ್‌ಗಳನ್ನು ಹೊಂದಿರುವ ಗುಂಪಿನ ಸದಸ್ಯರು, ತಮ್ಮ ಭುಜ ಪದಕದಲ್ಲಿ "ಸಾಗರ ಸ್ಕೌಟ್" ಅಥವಾ "ವಾಯು ಸ್ಕೌಟ್" ಪದಗಳನ್ನು ಸೇರಿಸಬಾರದು. ಬದಲಾಗಿ ರಾಷ್ಟ್ರೀಯ ಸಂಸ್ಥೆಯುವರು ಒದಗಿಸಿರುವ "ಸಾಗರಸ್ಕೌಟ್" ಅಥವಾ "ವಾಯುಸ್ಕೌಟ್" ಎಂಬ ಕೆಂಪು ಪದಗಳಲ್ಲಿ ಬರೆದಿರುವ ಬಿಳಿ ಪಟ್ಟಿಗಳನ್ನು ಎರಡೂ ಭುಜಗಳ ಪಟ್ಟಿಯಲ್ಲಿ ಧರಿಸುವುದು.

vii. **ಸದಸ್ಯತ್ವ ಪದಕ:** ಹಳದಿ ಬಣ್ಣದಲ್ಲಿ, ಅಶೋಕ ಚಕ್ರವನ್ನು ಮಧ್ಯದಲ್ಲಿ ಒಳಗೊಂಡ ತ್ರಿದಳ ಪತ್ರವನ್ನು ಮೇಲಿರಿಸಿದ, ಹಳದಿ ಬಣ್ಣದ ತ್ರಿದಳ ಕಮಲವಿರುವ ಹಸಿರು ಹಿನ್ನೆಲೆಯ ಬಟ್ಟೆಯ ಪದಕವನ್ನು ಎಡ ಜೇಬಿನ ಪಟ್ಟಿಯ ಮಧ್ಯಭಾಗದಲ್ಲಿ ಧರಿಸಬೇಕು.

viii. **ವಿಶ್ವ ಸ್ಕೌಟ್ ಪದಕ:** ವಿಶ್ವ ಸ್ಕೌಟ್ ಪದಕವನ್ನು ಸಮವಸ್ತ್ರದ ಷರ್ಟ್‌ನ ಬಲ ಜೇಬಿನ ಮಧ್ಯೆ ಧರಿಸತಕ್ಕದ್ದು.

ix. **ಶ್ರೇಣಿ ಪದಕ :** ತ್ರಿದಳ ಕಮಲ, ತ್ರಿದಳ ಪತ್ರ ಮತ್ತು ಅಶೋಕ ಚಕ್ರಗಳನ್ನು ಹಳದಿ ಬಣ್ಣದಲ್ಲಿ ಹೊಂದಿರುವ, ಹಸಿರು ಅಂಚುಳ್ಳ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನದ ಹಸಿರು ಬಣ್ಣದ ಬಟ್ಟೆಯ ಶ್ರೇಣಿಪದಕವನ್ನು ಸ್ಕೌಟ್ ಮಾಸ್ಟರ್ ಧರಿಸಬೇಕು.

ತ್ರಿದಳ ಕಮಲ, ತ್ರಿದಳ ಪತ್ರ ಮತ್ತು ಅಶೋಕ ಚಕ್ರಗಳನ್ನು ಹಳದಿ ಬಣ್ಣದಲ್ಲಿ ಹೊಂದಿರುವ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನದ ಕೆಂಪು ಅಂಚುಳ್ಳ, ಹಸಿರು ಬಣ್ಣದ ಬಟ್ಟೆಯ ಶ್ರೇಣಿ ಪದಕವನ್ನು ಸಹಾಯಕ ಸ್ಕೌಟ್ ಮಾಸ್ಟರ್ ಧರಿಸಬೇಕು.

ಈ ಪದಕದ ಪಾದವು ಎಡ ಜೇಬಿನ ಮೇಲು ಹೊದಿಕೆಯ ಮೇಲೆ 4 ಸೆಂ.ಮೀ. ಅಂತರದಲ್ಲಿ ಇರುವಂತೆ ಧರಿಸಬೇಕು.

x. **ನಾಮಪಟ್ಟಿ:** ರಾಷ್ಟ್ರೀಯ ಕೇಂದ್ರ ಕಚೇರಿಯು ವಿನ್ಯಾಸಗೊಳಿಸಿರುವ ಮತ್ತು ಒದಗಿಸಿರುವ "The Bharat Scouts and Guides" ಎಂಬ ಅಕ್ಷರಗಳನ್ನುಳ್ಳ ನಾಮಪಟ್ಟಿಯನ್ನು ಬಲ ಜೇಬಿನ ಮೇಲೆ ಧರಿಸಬೇಕು. ಈ ಪಟ್ಟಿಯ ಅಳತೆಯು 11 ಸೆಂ.ಮೀ. x 2 ಸೆಂ.ಮೀ. ಆಗಿದ್ದು ಬಲಮೂಲೆಯಲ್ಲಿ 2 ಸೆಂ.ಮೀ. x 3 ಸೆಂ.ಮೀ. ಅಳತೆಯಲ್ಲಿ ರಾಷ್ಟ್ರ ಧ್ವಜದ ತ್ರಿವರ್ಣ ಹೊಂದಿದ್ದು, ಉಳಿದ ಭಾಗ ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಬರಹಕ್ಕಾಗಿ ಇರುತ್ತದೆ.

xi. **ಹೆಸರಿನ ಫಲಕ:** 8 ಸೆಂ.ಮೀ. ಉದ್ದ ಮತ್ತು 2 ಸೆಂ.ಮೀ. ಅಗಲ ಅಳತೆಯುಳ್ಳ ಬಿಳಿಯ ಪ್ಲಾಸ್ಟಿಕ್ ಪಲಕದ ಮೇಲೆ ವಯಸ್ಕ ನಾಯಕರ ಹೆಸರನ್ನು ಕಪ್ಪು ಅಕ್ಷರಗಳಲ್ಲಿ ಕೊರೆದಿರಬೇಕು. ಅದನ್ನು ಷರ್ಟಿನ ಬಲಜೇಬಿನ ಮೇಲ್ಭಾಗದಲ್ಲಿ ಭಾರತ್ ಸ್ಕೌಟ್ಸ್ ಆಂಡ್ ಗೈಡ್ಸ್ ಎಂಬ ನಾಮಪಟ್ಟಿಯ ಕೆಳಭಾಗದಲ್ಲಿ ಧರಿಸತಕ್ಕದ್ದು.

xii. **ಕಾಲುಚೀಲ ಅಥವಾ ಮೊಣಕಾಲುಚೀಲ :** ಕಪ್ಪು ಕಾಲುಚೀಲ ಅಥವಾ ಮೊಣಕಾಲುಚೀಲಗಳನ್ನು ಧರಿಸಬಹುದು. ಮೊಣಕಾಲು ಚೀಲಗಳನ್ನು ಧರಿಸಿದಾಗ, ನೀಲಿ ಬಣ್ಣದ ಲಾಡಿಪಟ್ಟಿಯ ಚುಂಗು (Garter tabs) 1 ಸೆಂ.ಮೀ. ಹೊರಗೆ ಕಾಲುಗಳ ಹೊರಭಾಗದಲ್ಲಿ ಕಾಣುವಂತೆ ಮೊಣಕಾಲಿನಿಂದ ಕೆಳಗೆ ಮಡಿಚಿರಬೇಕು. ಮೊಣಕಾಲುಚೀಲಗಳನ್ನು ನಿಕ್ಕರ್ ಧರಿಸಿದಾಗ ಮಾತ್ರ ಧರಿಸಬೇಕು.

xiii. **ಪಾದರಕ್ಷೆಗಳು:** ಲಾಡಿಗಳುಳ್ಳ (Lace) ಕಪ್ಪು ಷೂಗಳನ್ನು (ಚರ್ಮ ಅಥವಾ ಕ್ಯಾನ್‌ವಾಸ್) ಧರಿಸಬೇಕು.

xiv. **ಮೇಲಂಗಿ, ಜಲಾಭೇದ್ಯ ಅಂಗಿ, ತೋಳುಳ್ಳ ನಡುವಂಗಿ:** ಸಾಗರ ನೀಲಿ ಬಣ್ಣದ ಮೇಲಂಗಿ, ಸಾಗರ ನೀಲಿ ಬಣ್ಣದ ಬ್ಲೇಜರ್ ಅಥವಾ ಸಾಗರ ನೀಲಿ ಬಣ್ಣದ ಜರ್ಸಿ ಇವುಗಳನ್ನು ಚಳಿಗಾಲದಲ್ಲಿ ಮಾತ್ರ ಧರಿಸಬಹುದು.

xv. **ಲೋಹ ಪದಕ:** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಲೋಹದ ಪದಕವನ್ನು ಸಾದಾ ಉಡುಪಿನಲ್ಲಿ ಧರಿಸಬಹುದು.

xvi. **ಶೀಟಿದಾರ:** ಬೂದು ಬಣ್ಣದ ಶೀಟಿದಾರವನ್ನು ಕಂಠದ ಸುತ್ತಲೂ ಧರಿಸಿ, ಶೀಟಿಯನ್ನು ಎಡಜೇಬಿನಲ್ಲಿ ಇಳಿಬಿಡಬೇಕು.

xvii. **ಹೊರಾಂಗಣ ಚಟುವಟಿಕೆಗಳ ವೇಳೆ:** ಬಗಲಿನ ಚೀಲ ಅಥವಾ ಹೆಗಲಿನ ಚೀಲ ಒಯ್ಯಬಹುದು.

**ಸಾಂದರ್ಭಿಕ ಉಡುಪು:** 1) ಕಡುನೀಲಿ ಬಣ್ಣದ ಜೀನ್ಸ್ / ಪ್ಯಾಂಟ್ ಅಥವಾ ನಿಕ್ಕರ್. ಕಂಠಪಟ್ಟಿ ಉಳ್ಳ BSG ಮುದ್ರೆ ಹೊಂದಿದ ಜೇಬುಳ್ಳ / ಸಾದಾ ಸಾಗರ ನೀಲಿ ಬಣ್ಣದ "ಟಿ ಶರ್ಟ್ ಮತ್ತು BSG ಲಾಂಛನ ಹೊಂದಿದ ಕಡು ನೀಲಿ ಬಣ್ಣದ 'ಪಿ' ಕ್ಯಾಪನ್ನು / ಹಿತಕರವಾದ ಷೂಗಳೊಂದಿಗೆ ಕಾರ್ಯನಿರತ ಸಮವಸ್ತ್ರವಾಗಿ / ಕ್ಷೇತ್ರ ಚಟುವಟಿಕೆಗಳಿಗೆ ಐಚ್ಛಿಕವಾಗಿ ಧರಿಸಬಹುದು. 2) ರಾಷ್ಟ್ರ ಕಾರ್ಯಾಲಯವು ವಿನ್ಯಾಸಗೊಳಿಸಿರುವ ಸಣ್ಣ ಕೈಚೀಲವನ್ನು ಸೊಂಟ ಪಟ್ಟಿಯ ಮೇಲೆ ಧರಿಸಬಹುದು. 3) ವಿಶ್ವ ಸೋದರತೆ ವೋಗಲ್–ಚರ್ಮ/ಬೆತ್ತದ್ದು, ಒಂದೇ ಬಣ್ಣದ್ದನ್ನು ಧರಿಸಬಹುದು.

**5. (ಅ) ಮಹಿಳಾ ಸ್ಕೌಟ್‌ಮಾಸ್ಟರ್ ಮತ್ತು ಸಹಾಯಕ ಮಹಿಳಾ ಸ್ಕೌಟ್ ಮಾಸ್ಟರ್‌ಗಳ ಸಮವಸ್ತ್ರ :**

ಮಹಿಳಾ ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಮಹಿಳಾ ಸ್ಕೌಟ್ ಮಾಸ್ಟರುಗಳ ಸಮವಸ್ತ್ರವು ಕ್ರಮವಾಗಿ ಮಹಿಳಾ ಕಬ್ ಮಾಸ್ಟರ್ ಮತ್ತು ಸಹಾಯಕ ಮಹಿಳಾ ಕಬ್ ಮಾಸ್ಟರ್‌ಗಳ ಸಮವಸ್ತ್ರದಂತೆಯೇ ಇರುತ್ತದೆ. ಈ ಕೆಳಕಂಡ ವ್ಯತ್ಯಾಸಗಳನ್ನು ಹೊಂದಿರುತ್ತದೆ.

**ಶ್ರೇಣಿ ಪದಕ :** ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರುಗಳಿಗೆ ನಿಗದಿಪಡಿಸಿರುವ ರೀತಿಯದು.

**ಕಂಠವಸ್ತ್ರ :** ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರುಗಳಿಗೆ ನಿಗದಿಪಡಿಸಿದ ಕಂಠವಸ್ತ್ರ.

**ಭುಜ ಪದಕ :** ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರ್‌ಗಳಿಗೆ ನಿಗದಿಪಡಿಸಿದ ಭುಜಪದಕಗಳು.

**(ಆ) ವಾಯು ಸ್ಕೌಟ್‌ಮಾಸ್ಟರ್ ಮತ್ತು ಸಹಾಯಕ ವಾಯು ಸ್ಕೌಟ್ ಮಾಸ್ಟರ್‌ಗಳ ಸಮವಸ್ತ್ರ :**

ಎಲ್ಲಾ ವಾಯು ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ವಾಯು ಸ್ಕೌಟ್ ಮಾಸ್ಟರುಗಳು ಕ್ರಮವಾಗಿ ಸ್ಕೌಟ್‌ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರ್‌ಗಳ ಸಮವಸ್ತ್ರವನ್ನು ಧರಿಸಬೇಕು. ಇದರೊಂದಿಗೆ ವಾಯು ಸ್ಕೌಟ್ ಪದಕವನ್ನು ಬಲಜೇಬಿನ ಮೇಲೆ 4 ಸೆಂ.ಮೀ. ಅಂತರದಲ್ಲಿ ಧರಿಸಬೇಕು.

**(ಇ) ಸಾಗರ ಸ್ಕೌಟ್‌ಮಾಸ್ಟರ್ ಮತ್ತು ಸಹಾಯಕ ಸಾಗರ ಸ್ಕೌಟ್ ಮಾಸ್ಟರ್‌ಗಳ ಸಮವಸ್ತ್ರ :**

ಎಲ್ಲಾ ಸಾಗರ ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸಾಗರ ಸ್ಕೌಟ್ ಮಾಸ್ಟರುಗಳು ಕ್ರಮವಾಗಿ ಸ್ಕೌಟ್‌ಮಾಸ್ಟರ್ ಮತ್ತು ಸಹಾಯಕ ಸಹಾಯಕ ಸ್ಕೌಟ್ ಮಾಸ್ಟರ್‌ಗಳ ಸಮವಸ್ತ್ರವನ್ನು ಧರಿಸಬೇಕು. ಇದರೊಂದಿಗೆ ಸಾಗರ ಸ್ಕೌಟ್ ಪದಕವನ್ನು ಬಲಜೇಬಿನ ಮೇಲೆ 4 ಸೆಂ.ಮೀ. ಅಂತರದಲ್ಲಿ ಧರಿಸಬೇಕು.

**6. ಪಟಾಲಂ ಪದ್ಧತಿ (Patrol System) :**

i. ದಳವನ್ನು ಪಟಾಲಂಗಳಾಗಿ ವಿಭಜಿಸಬೇಕು. ಪ್ರತಿ ಪಟಾಲಂಗೂ ಪಟಾಲಂ ಮೂಲೆ, ಪಟಾಲಂ ಹಾಡು, ಪಟಾಲಂ ಘೋಷ, ಪಟಾಲಂ ಚಿಹ್ನೆ ಪಟಾಲಂ ಕೂಗು ಹಾಗೂ ಪಟಾಲಂ ಪತಾಕೆ ಇರುತ್ತವೆ.

ii. ಅ. ಪಟಾಲಂ ನಾಯಕ ಮತ್ತು ದ್ವಿತೀಯಕ ಸೇರಿದಂತೆ 6 ರಿಂದ 8 ಸ್ಕೌಟ್‌ಗಳು ಪ್ರತಿ ಪಟಾಲಂನಲ್ಲಿರುತ್ತಾರೆ.

ಆ. ಬಾಲಕರಿಗಾಗಿ ಸ್ಕೌಟಿಂಗ್‌ನಿಂದ ಆಯ್ದ, ಪಟಾಲಂ ಪರಿಷತ್ತಿನಲ್ಲಿ ಆಲೋಚಿಸಿ, ನಿರ್ಧಾರಗೊಂಡ ಪ್ರಾಣಿ/ಹಕ್ಕಿಯ ಹೆಸರಿರುತ್ತದೆ. ಮತ್ತು ಪ್ರತಿ ಪಟಾಲಂ ಸದಸ್ಯನೂ, ಪಟಾಲಂನ ವರ್ಣಪಟ್ಟಿಯನ್ನು ಸಮವಸ್ತ್ರದ ಮೇಲೆ ಧರಿಸಬೇಕು.

iii. **ದಳ ನಾಯಕ**



ಆರು ತಿಂಗಳಿಗೆ ಕಡಿಮೆ ಇಲ್ಲದಂತೆ ಪಟಾಲಂ ನಾಯಕನಾಗಿ ಅನುಭವ ಪಡೆದ (ದ್ವಿತೀಯ ಸೋಪಾನದ ಪದಕ ಪಡೆದಿದ್ದರೆ ಅಪೇಕ್ಷಣೀಯ) ಒಬ್ಬ ಪಟಾಲಂ ನಾಯಕನನ್ನು, ಗೌರವಾನ್ವಿತ ಸಭೆಯಲ್ಲಿ ಚರ್ಚಿಸಿ, ದಳ ನಾಯಕನನ್ನಾಗಿ ಸ್ಕೌಟ್ ಮಾಸ್ಟರರು ನೇಮಿಸುತ್ತಾರೆ. ಅವನು ಸ್ಕೌಟ್ ಸಮವಸ್ತ್ರದ ಜೊತೆಗೆ 6 ಸೆಂ. ಮೀ. ಉದ್ದದ 1.5 ಸೆಂ.ಮೀ. ಅಗಲದ, ಉಣ್ಣೆಯ ಅಥವಾ ಹತ್ತಿಯ ಮೂರು ಲಂಬ ಹಸಿರು ಪಟ್ಟಿಗಳನ್ನು ಧರಿಸಬೇಕು. ಮಧ್ಯದ ಪಟ್ಟಿಯು ಸದಸ್ಯತ್ವ ಪದಕದ ಕೆಳಗೆ, ಹಾಗೂ ಉಳಿದೆರಡು ಪಟ್ಟಿಗಳು ಪದಕದ ಎರಡೂ ಕಡೆ ಇರಬೇಕು. ಹಾಗೂ ಎಡಜೇಬಿನ ಮೇಲ್ಭಾಗದಲ್ಲಿ ಸೇವಾ ತಾರೆಗಿಂತ ಮೇಲೆ ಅಥವಾ ಜೆರ್ಸಿಯ ಮೇಲೆ ಅದೇ ಸ್ಥಳದಲ್ಲಿ ದಳನಾಯಕನ ಪದಕವನ್ನು ಧರಿಸಬೇಕು. ಅವನು ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರ್‌ಗೆ ಸಕ್ರಿಯ ಸಹಕಾರವನ್ನು ನೀಡುತ್ತಾನೆ. ಹಾಗೂ ವಯಸ್ಕ ನಾಯಕರ ಗೈರು ಹಾಜರಿಯಲ್ಲಿ ಘಟಕದ ಪ್ರಭಾರವನ್ನು ವಹಿಸಿಕೊಳ್ಳುತ್ತಾನೆ. ದಳನಾಯಕನ ಪದಕವು ಆಯತಾಕಾರವಾಗಿದ್ದು, ಹಸಿರು ಹಿನ್ನೆಲೆಯಲ್ಲಿ ಹಳದಿ ಅಂಚನ್ನು ಹೊಂದಿದ ಹಳದಿ ಬಣ್ಣದ ಲಾಂಛನವನ್ನು ಒಳಗೊಂಡಿದ್ದು ಆ ಲಾಂಛನದ ಎಡಬದಿಯಲ್ಲಿ ಮೂರು ಲಂಬ ಹಸಿರು ಪಟ್ಟಿಗಳನ್ನು ಹೊಂದಿರುತ್ತದೆ.

iv. **ಸಹಾಯಕ ದಳನಾಯಕ**

ಆರು ತಿಂಗಳಿಗೆ ಕಡಿಮೆ ಇಲ್ಲದಂತೆ ಪಟಾಲಂ ನಾಯಕನಾಗಿ ಅನುಭವ ಪಡೆದ (ದ್ವಿತೀಯ ಸೋಪಾನ ಪದಕ ಪಡೆದಿರುವುದು ಅಪೇಕ್ಷಣೀಯ) ಒಬ್ಬ ಪಟಾಲಂ ನಾಯಕನನ್ನು ಗೌರವಾನ್ವಿತ ಸಭೆಯಲ್ಲಿ ಚರ್ಚಿಸಿ, ಸಹಾಯಕ ದಳನಾಯಕನನ್ನಾಗಿ ಸ್ಕೌಟ್ ಮಾಸ್ಟರರು ನೇಮಿಸುತ್ತಾರೆ. ಆತನು ಸ್ಕೌಟ್ ಸಮವಸ್ತ್ರ ಧರಿಸುವುದರ ಜೊತೆಗೆ, ಎಡಜೇಬಿನ ಮೇಲೆ ಸದಸ್ಯತ್ವ ಪದಕದ ಎರಡೂ ಕಡೆ, 6 ಸೆಂ.ಮೀ.



ಉದ್ದ, 1.5 ಸೆಂ.ಮೀ ಅಗಲದ ಉಣ್ಣೆಯ ಅಥವಾ ಹತ್ತಿಯ ಎರಡು ಹಸಿರು ಪಟ್ಟಿಗಳನ್ನು ಧರಿಸಬೇಕು. ಹಾಗೂ ಎಡಜೇಬಿನ ಮೇಲ್ಭಾಗದಲ್ಲಿ ಸೇವಾ ತಾರೆಗಿಂತ ಮೇಲೆ ಅಥವಾ ಜೆರ್ಸಿಯ ಮೇಲೆ ಅದೇ ಸ್ಥಳದಲ್ಲಿ ಸಹಾಯಕ ದಳನಾಯಕನ ಪದಕವನ್ನು ಧರಿಸುತ್ತಾನೆ. ಸಹಾಯಕ ದಳನಾಯಕನು ನಿರ್ದೇಶಿತ ರೀತಿಯಲ್ಲಿ ದಳನಾಯಕನಿಗೆ ನೆರವು ನೀಡುತ್ತಾನೆ. ಸಹಾಯಕ ದಳನಾಯಕನ ಪದಕವು ಆಯಾತಾಕಾರವಿದ್ದು, ಹಸಿರು ಹಿನ್ನೆಲೆಯಲ್ಲಿ ಹಸಿರು ಅಂಚನ್ನು ಹೊಂದಿದ, ಹಸಿರುಬಣ್ಣದ ಮೂರು ಪಟ್ಟಿಗಳನ್ನು ಒಳಗೊಂಡಿರುತ್ತದೆ.

### v. ಪಟಾಲಂ ನಾಯಕ

ಪ್ರತಿಯೊಂದು ಪಟಾಲಂಗೂ ಒಬ್ಬ ನಾಯಕನಿರತಕ್ಕದ್ದು, ಗೌರವಾನ್ವಿತ ಸಭೆ ಹಾಗೂ ಸಂಬಂಧ ಪಟ್ಟ ಪಟಾಲಂನೊಂದಿಗೆ ಚರ್ಚಿಸಿ ಸ್ಕೌಟ್‌ಗಳ ಪಟಾಲಂನ ನಾಯಕತ್ವ ವಹಿಸಲು ಒಬ್ಬ ಸ್ಕೌಟ್‌ನನ್ನು ಪಟಾಲಂ ನಾಯಕನನ್ನಾಗಿ ಸ್ಕೌಟ್ ಮಾಸ್ಟರ್ ನೇಮಿಸುತ್ತಾರೆ. ಇವನು ಸ್ಕೌಟ್ ಸಮವಸ್ತ್ರದೊಂದಿಗೆ ಎಡಜೇಬಿನ ಮೇಲೆ, ಸದಸ್ಯತ್ವ ಪದಕದ ಎರಡೂ ಕಡೆ ಉಣ್ಣೆಯ ಅಥವಾ ಹತ್ತಿಯಿಂದ ಮಾಡಿದ 6 ಸೆಂ.ಮೀ. ಉದ್ದದ 1.5 ಸೆಂ.ಮೀ. ಅಗಲದ ಎರಡು ಹಸಿರು ಬಣ್ಣದ ಪಟ್ಟಿಗಳನ್ನು ಧರಿಸಬೇಕು. ಪಟಾಲಂನ ಧ್ವಜವನ್ನು ಅವನು ಒಯ್ಯಬೇಕು.

### vi. ದ್ವಿತೀಯಕ

ಪ್ರತಿ ಪಟಾಲಂಗೂ ಒಬ್ಬ ದ್ವಿತೀಯಕನಿರಬೇಕು. ಸ್ಕೌಟ್ ಮಾಸ್ಟರ್ ಹಾಗೂ ಗೌರವಾನ್ವಿತ ಸಭೆಯ ಅನುಮೋದನೆಯ ಮೇರೆಗೆ ಪಟಾಲಂ ನಾಯಕನು ದ್ವಿತೀಯಕನನ್ನು ಆರಿಸಿಕೊಳ್ಳುತ್ತಾನೆ. ಅವನು ಪಟಾಲಂ ನಾಯಕನಿಗೆ ನೆರವು ನಿಡುತ್ತಾನೆ. ಮತ್ತು ಪಟಾಲಂ ನಾಯಕನ ಗೈರು ಹಾಜರಿಯಲ್ಲಿ ಪಟಾಲಂನ ನೇತೃತ್ವ ವಹಿಸುತ್ತಾನೆ. ಅವನು ಸ್ಕೌಟ್ ಸಮವಸ್ತ್ರದೊಂದಿಗೆ ಎಡಜೇಬಿನ ಮೇಲೆ, ಸದಸ್ಯತ್ವ ಪದಕದ ಬಲಬದಿಯಲ್ಲಿ 6 ಸೆಂ. ಮೀ. ಉದ್ದ, 1.5 ಸೆಂ. ಮೀ. ಅಗಲದ ಒಂದು ಹಸಿರು ಪಟ್ಟಿಯನ್ನು ಧರಿಸಬೇಕು.

### vii. ಗೌರವಾನ್ವಿತ ಸಭೆ

ಪ್ರತಿದಳಕ್ಕೂ ಒಂದು ಗೌರವಾನ್ವಿತ ಸಭೆ ಇರತಕ್ಕದ್ದು. ಗೌರವಾನ್ವಿತ ಸಭೆಯು ದಳನಾಯಕ, ಸಹಾಯಕ ದಳನಾಯಕ ಮತ್ತು ಪಟಾಲಂ ನಾಯಕರನ್ನು ಒಳಗೊಂಡಿರತಕ್ಕದ್ದು. ಶಿಸ್ತಿನ ವಿಷಯ ವ್ಯವಹರಿಸುವ ಸಂದರ್ಭ ಹೊರತುಪಡಿಸಿ, ಉಳಿದಂತೆ ದ್ವಿತೀಯಕರನ್ನು ಗೌರವಾನ್ವಿತ ಸಭೆಯ ಸದಸ್ಯರನ್ನಾಗಿ ಅನುಮತಿಸ ಬಹುದು. ದಳನಾಯಕ ಅಥವಾ ಸಹಾಯಕ ದಳನಾಯಕ ಅಥವಾ ಚುನಾಯಿಸಲ್ಪಟ್ಟ ಒಬ್ಬ ಪಟಾಲಂ ನಾಯಕನು ಕಾರ್ಯಾಧ್ಯಕ್ಷನಾಗಿ ಕಾರ್ಯ ನಿರ್ವಹಿಸುತ್ತಾನೆ ಮತ್ತು ಸದಸ್ಯರ ಪೈಕಿ ಒಬ್ಬರು ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಾರೆ. ಗೌರವಾನ್ವಿತ ಸಭೆಯು ದಳದ ಚಟುವಟಿಕೆಗಳ ಯೋಜನೆ

ತಯಾರಿಸುತ್ತದೆ. ದಳದ ಆಂತರಿಕ ವಿಷಯಗಳ ಬಗ್ಗೆ, ವ್ಯವಹರಿಸುತ್ತದೆ ಹಾಗೂ ಆರ್ಥಿಕ ಮತ್ತು ಶಿಸ್ತಿನ ವಿಷಯಗಳ ಬಗ್ಗೆ ವ್ಯವಹರಿಸುತ್ತದೆ. ಈ ಸಭೆಗೆ ಸ್ಕೌಟ್ ಮಾಸ್ಟರ್ ಮತ್ತು ಸಹಾಯಕ ಸ್ಕೌಟ್ ಮಾಸ್ಟರ್‌ಗಳು ಸಲಹೆಗಾರರಾಗಿ ಇರಬೇಕು.

**viii. ಪಟಾಲಂ ಮಂತ್ರಾಲೋಚನಾ ಸಭೆ (ಪರಿಷತ್ತು)**

ಪ್ರತಿ ಪಟಾಲಂಗೂ ಒಂದು ಮಂತ್ರಾಲೋಚನಾ ಸಭೆ ಇರತಕ್ಕದ್ದು. ಪಟಾಲಂ ಮಂತ್ರಾಲೋಚನಾ ಸಭೆಯು ಪಟಾಲಂನ ಎಲ್ಲ ಸದಸ್ಯರನ್ನೂ ಒಳಗೊಂಡಿರತಕ್ಕದ್ದು. ಪಟಾಲಂನ ಎಲ್ಲಾ ವಿಷಯಗಳ ಬಗ್ಗೆ ಪಟಾಲಂ ಮಂತ್ರಾಲೋಚನಾ ಸಭೆಯು ವ್ಯವಹರಿಸತಕ್ಕದ್ದು.

## 7. ಸ್ಕೌಟ್

1. 10 ವರ್ಷ ಪೂರೈಸಿದ ಆದರೆ 17 ವರ್ಷ ಪೂರೈಸದ ಭಾರತದ ಪ್ರಜೆಯಾದ ಒಬ್ಬ ಬಾಲಕನು ಸ್ಕೌಟ್ ಆಕಾಂಕ್ಷಿಯಾಗಿ ದಾಖಲಾಗಲು ಅರ್ಹತೆ ಪಡೆಯುತ್ತಾನೆ.

2. i. ಒಬ್ಬ ಸ್ಕೌಟ್ ಆಕಾಂಕ್ಷಿಯು ಸ್ಕೌಟ್ ಆಗಿ ದೀಕ್ಷೆ ಹೊಂದುವ ಮುನ್ನ "ಪ್ರವೇಶ್"ದ ಎಲ್ಲಾ ಅವಶ್ಯಕತೆಗಳನ್ನು ಪೂರ್ಣಗೊಳಿಸಿ ಸ್ಕೌಟ್ ಮಾಸ್ಟರ್‌ಗೆ ತೃಪ್ತಿಯಾಗುವಂತೆ ಮೂರು ತಿಂಗಳುಗಳ ಕಾಲ ಕಾರ್ಯನಿರ್ವಹಿಸಬೇಕು.

**ii. ಪ್ರವೇಶ್‌ದ ಅವಶ್ಯಕತೆಗಳು:**

1. ಅ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ನಿರೂಪಣೆ, ಉದ್ದೇಶ, ಗುರಿ, ತತ್ವಗಳು ಮತ್ತು ವಿಧಾನಗಳು ಸೇರಿದಂತೆ ಸ್ಕೌಟಿಂಗ್‌ನ ಮೂಲದ ಬಗ್ಗೆ ಸಂಕ್ಷಿಪ್ತ ಮಾಹಿತಿ ಹೊಂದಿರ ಬೇಕು.

   ಆ. ಸಂಸ್ಥೆಯ ಸಮಗ್ರತೆಯ ಬಗ್ಗೆ ತಿಳಿದಿರಬೇಕು.
2. ಸ್ಕೌಟ್ ಪ್ರತಿಜ್ಞೆ, ನಿಯಮ ಮತ್ತು ಧ್ಯೇಯ ತಿಳಿದಿರಬೇಕು.
3. ಸ್ಕೌಟ್ ಸಂಕೇತ, ವಂದನೆ ಮತ್ತು ಎಡ ಹಸ್ತಲಾಘವ ತಿಳಿದಿರಬೇಕು ಮತ್ತು ಮಾಡಿ ತೋರಿಸಬೇಕು.
4. ಮನೆಯಲ್ಲಿ ಕನಿಷ್ಠ ಒಂದು ತಿಂಗಳ ಕಾಲ ದಿನಚರಿ ನಿರ್ವಹಿಸಿ, ದಾಖಲಿಸಬೇಕು.
5. ಸ್ಕೌಟ್ ಸಮವಸ್ತ್ರದ ಭಾಗಗಳನ್ನು ತಿಳಿಯುವುದು ಮತ್ತು ಅದನ್ನು ಸರಿಯಾಗಿ ಧರಿಸುವ ಬಗ್ಗೆ ತಿಳಿವಳಿಕೆ ಇರಬೇಕು.
6. ರಾಷ್ಟ್ರಧ್ವಜ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜ ಮತ್ತು ವಿಶ್ವ ಸ್ಕೌಟ್ ಧ್ವಜ ಇವುಗಳ ರಚನೆ ಮತ್ತು ಧ್ವಜ ಶಿಷ್ಟಾಚಾರ ತಿಳಿದಿರುವುದು.
7. ರಾಷ್ಟ್ರಗೀತೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಾರ್ಥನೆ ಹಾಗೂ ಭಾರತ್

ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜ ಗೀತೆಗಳನ್ನು ಸರಿಯಾಗಿ ಹಾಡಲು ಬರಬೇಕು. ಅಲ್ಲದೆ ಅವುಗಳ ರಚನಾಕಾರರು, ಹಾಡುವ ಅವಧಿ ಮತ್ತು ಹಾಡುಗಳ ಅರ್ಥ ತಿಳಿದಿರಬೇಕು.

8. ಕನಿಷ್ಠ ನಾಲ್ಕು ದಳ ಸಭೆಗಳಲ್ಲಿ ಹಾಜರಿರಬೇಕು.

9. ತನ್ನ ಪಟಾಲಂನೊಡನೆ 4 ಗಂಟೆಗಳ ಕಾಲ ಅರ್ಥಪೂರ್ಣ ಹೊರಸಂಚಾರ ಕೈಗೊಳ್ಳಬೇಕು.

**iii.** ನಂತರ ಅವನು ತನ್ನ ಸ್ಕೌಟ್ ಮಾಸ್ಟರಿಗೆ ಸ್ಕೌಟ್ ಪ್ರತಿಜ್ಞೆ ನೀಡಿ, ಸ್ಕೌಟ್ ಆಗಿ ದೀಕ್ಷೆ ಹೊಂದುವನು. ಆ ಬಳಿಕ ಸ್ಕೌಟ್ ಸಮವಸ್ತ್ರ ಮತ್ತು ಸದಸ್ಯತ್ವ ಪದಕ ಧರಿಸಲು ಅವನು ಅರ್ಹನಾಗುತ್ತಾನೆ.

ಹಳದಿ ಬಣ್ಣದಲ್ಲಿ ಅಶೋಕ ಚಕ್ರವನ್ನು ಮಧ್ಯದಲ್ಲಿ ಒಳಗೊಂಡ ತ್ರಿದಳಪತ್ರವನ್ನು ಮೇಲಿರಿಸಿದ ಹಳದಿ ಬಣ್ಣದ ತ್ರಿದಳ ಕಮಲ ಇರುವ ಹಸಿರು ಹಿನ್ನೆಲೆಯ ಬಟ್ಟೆಯ ಪದಕವೇ ಸದಸ್ಯತ್ವ ಪದಕ. ಷರ್ಟ್‌ನ ಎಡಜೇಬಿನ ಪಟ್ಟಿಯ ಮಧ್ಯದಲ್ಲಿ ಅಥವಾ ಜರ್ಸಿಯ ಮೇಲೆ ಅದೇ ಜಾಗದಲ್ಲಿ ಪದಕವನ್ನು ಧರಿಸಬೇಕು. ಸ್ಕೌಟ್‌ಮಾಸ್ಟರರ ಶಿಫಾರಸ್ಸಿನ ಮೇರೆಗೆ ಸ್ಥಳೀಯ ಸಂಸ್ಥೆ ಅಥವಾ ಜಿಲ್ಲಾ ಸಂಸ್ಥೆಯವರು ಸದಸ್ಯತ್ವ ಪದಕವನ್ನು ನೀಡುವರು.

***ಸೂಚನೆ :*** ಅ. ಸ್ಕೌಟ್‌ಗಳು ಪ್ರತಿದಿನ ಕನಿಷ್ಠ ಒಂದು ಉಪಕಾರ ಮಾಡುವ ಅಭ್ಯಾಸವನ್ನು ರೂಢಿಸಿಕೊಳ್ಳುವ ಅವಕಾಶವನ್ನು ಒದಗಿಸಬೇಕು.

ಆ. **ಸ್ಕೌಟ್ ಪ್ರತಿಜ್ಞೆ:**

"ನಾನು ನನ್ನ ಕೈಲಾದ ಮಟ್ಟಿಗೆ
ದೇವರಿಗೆ* ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯವನ್ನು ಮಾಡಲು,
ಇತರರಿಗೆ ಸಹಾಯ ಮಾಡಲು ಮತ್ತು
ಸ್ಕೌಟ್ ನಿಯಮವನ್ನು ಪಾಲಿಸಲು
ಕೈಲಾದಷ್ಟು ಪ್ರಯತ್ನ ಮಾಡುತ್ತೇನೆಂದು
ನನ್ನ ಗೌರವ ಸಾಕ್ಷಿಯಾಗಿ ಪ್ರತಿಜ್ಞೆ ಮಾಡುತ್ತೇನೆ"

* ಅಪೇಕ್ಷೆ ಇದ್ದರೆ 'ದೇವರು' ಪದದ ಬದಲಾಗಿ 'ಧರ್ಮ' ಪದವನ್ನು ಬಳಸಬಹುದು.

ಇ. **ಸ್ಕೌಟ್ ನಿಯಮ:**

i. ಸ್ಕೌಟ್ ವಿಶ್ವಾಸಾರ್ಹನು

ii. ಸ್ಕೌಟ್ ನಿಷ್ಠಾವಂತನು.

iii. ಸ್ಕೌಟ್ ಎಲ್ಲರಿಗೂ ಸ್ನೇಹಿತನು ಮತ್ತು ಇತರ ಸ್ಕೌಟ್‌ಗಳಿಗೆ ಸೋದರನು.

iv. ಸ್ಕೌಟ್ ವಿನಯಿ

v. ಸ್ಕೌಟ್ ಪ್ರಾಣಿಮಿತ್ರನು ಮತ್ತು ಪ್ರಕೃತಿ ಪ್ರೇಮಿ.

vi. ಸ್ಕೌಟ್ ಶಿಸ್ತುಳ್ಳವನು ಮತ್ತು ಸಾರ್ವಜನಿಕ ಆಸ್ತಿಯನ್ನು ರಕ್ಷಿಸಲು ನೆರವಾಗುವನು.

vii. ಸ್ಕೌಟ್ ಧೈರ್ಯಶಾಲಿ

viii. ಸ್ಕೌಟ್ ಮಿತವ್ಯಯಿ

ix. ಸ್ಕೌಟ್ ಮನಸ್ಸಿನಲ್ಲಿ, ಮಾತಿನಲ್ಲಿ, ಮತ್ತು ಕೃತಿಯಲ್ಲಿ ಪರಿಶುದ್ಧನು.

**ಈ. ಧ್ಯೇಯ :**

"ಸಿದ್ಧನಾಗಿರು"ಎಂಬುದೇ ಸ್ಕೌಟ್ ಧ್ಯೇಯ. ದೈಹಿಕವಾಗಿ ಸದೃಢವಾಗಿದ್ದು, ಮಾನಸಿಕವಾಗಿ ಎಚ್ಚರವಾಗಿದ್ದು ಮತ್ತು ನೈತಿಕವಾಗಿ ನೇರವಾಗಿದ್ದು ಇದನ್ನು ಸಾಧಿಸಬೇಕು.

**ಉ. ಸಂಕೇತ :**

ಬಲಗೈಯನ್ನು ಭುಜದ ಎತ್ತರಕ್ಕೆ ನಿಲ್ಲಿಸಿ ಹಸ್ತವನ್ನು ಮುಂದೆ ಮಾಡಿ ಮಧ್ಯದ ಮೂರು ಬೆರಳುಗಳನ್ನು ಮೇಲೆ ಚಾಚಿ, ಕಿರು ಬೆರಳಿನ ಮೇಲೆ ಹೆಬ್ಬೆರಳನ್ನು ಮುಚ್ಚಿ, ಸ್ಕೌಟ್ ಸಂಕೇತವನ್ನು ನೀಡಲಾಗುತ್ತದೆ.

**ಊ. ವಂದನೆ :**

ಬಲ ತೋಳನ್ನು ಭುಜದ ಸಮಕ್ಕೆ ತಂದು, ಹಸ್ತವನ್ನು ಮುಂದೆ ಮಾಡಿ, ಮಧ್ಯದ ಮೂರು ಬೆರಳುಗಳನ್ನು ಚಾಚಿ, ಬಲಗಣ್ಣಿನ ಮೇಲೆ ಮಧ್ಯದಲ್ಲಿ ಹಣೆಯನ್ನು ತೋರು ಬೆರಳು ಮುಟ್ಟುವಂತೆ ಮಾಡಿ ಕಿರು ಬೆರಳಿನಮೇಲೆ ಹೆಬ್ಬೆರಳನ್ನು ಮುಚ್ಚಿ ಸ್ಕೌಟ್ ವಂದನೆ ನೀಡಲಾಗುತ್ತದೆ. ವಂದಿಸಿದ ಬಳಿಕ ತೋಳನ್ನು ಚುರುಕಾಗಿ ಕೆಳಗಿಳಿಸಬೇಕು. ಬೆತ್ತ ಅಥವಾ ದುಂಡು ಹಿಡಿಯ ಬೆತ್ತ ಒಯ್ಯುವಾಗ ಅದನ್ನು ಎಡಗೈಗೆ ಹಸ್ತಾಂತರಿಸಬೇಕು ಅಥವಾ ಎಡ ಕಂಕುಳಿನಲ್ಲಿ ಇಡಬೇಕು. ದಂಡವನ್ನು ಒಯ್ಯುವಾಗ ಎಡ ಮುಂದೋಳನ್ನು ಮೊಳಕೈ ಬಳಿ ಲಂಬವಾಗಿರುವಂತೆ ಬಾಗಿಸಿ ಬಲಗೈನ ಮಧ್ಯದ ಹಸ್ತವನ್ನು ಕೆಳಮುಖಮಾಡಿ ತೋರುಬೆರಳು ದಂಡವನ್ನು ಸ್ಪರ್ಶಿಸುವಂತೆ ವಂದನೆ ನೀಡಬೇಕು. ಎರಡೂ ಕೈಗಳು ಕಾರ್ಯನಿರತವಾಗಿರುವಾಗ ತಲೆಯನ್ನು ಬಲ ಅಥವಾ ಎಡಕ್ಕೆ ತಿರುಗಿಸುವ ಮೂಲಕ (ಐಸ್ ರೈಟ್/ ಐಸ್.ಲೆಫ್ಟ್) ವಂದನೆ ನೀಡಲಾಗುತ್ತದೆ.

## 8. ಸ್ಕೌಟ್ ಸಮವಸ್ತ್ರ

ಸ್ಕೌಟನು ಈ ಕೆಳಕಂಡಂತೆ ಸಮವಸ್ತ್ರ ಧರಿಸತಕ್ಕದ್ದು.

i. **ಷರ್ಟ್** : ಮುಚ್ಚಳ ಸಹಿತವಾದ ಎರಡು ಜೇಬುಗಳುಳ್ಳ, ಭುಜಪಟ್ಟಿಗಳನ್ನು

ಹೊಂದಿದ ಅರ್ಧ ಅಥವಾ ಮೇಲಕ್ಕೆ ಮಡಿಚಿದ ತೋಳುಗಳುಳ್ಳ ಬೂದು (ಸ್ಟೀಲ್ ಗ್ರೇ) ಬಣ್ಣದ ಷರ್ಟ್. ಚಳಿ ಹವೆಯಲ್ಲಿ ತೋಳಿನ ಭಾಗ ಕೆಳಗಿಳಿಸಬಹುದು.

ii. **ನಿಕ್ಕರ್ ಅಥವಾ ಪ್ಯಾಂಟ್ :** ಸಾಗರ ನೀಲಿ ಬಣ್ಣದ ನಿಕ್ಕರ್ ಅಥವಾ ಪ್ಯಾಂಟ್ ಧರಿಸತಕ್ಕದ್ದು. ಆದರೆ ರಾಷ್ಟ್ರಪತಿ ಸ್ಕೌಟ್ ಪರೀಕ್ಷಾ ಶಿಬಿರ ಮತ್ತು ಪ್ರಶಸ್ತಿ ವಿತರಣೆಯ ವೇಳೆ ಪ್ಯಾಂಟ್ ಕಡ್ಡಯವಾಗಿ ಧರಿಸಬೇಕು. ಪ್ಯಾಂಟ್‌ಗಳು ಅಳಕ ಇರಬಾರದು. ಹಾಗೆಂದು ಬಿಗಿಸಿದಂತೆ ಇರಬಾರದು. ಪ್ಯಾಂಟ್‌ಗಳಿಗೆ ಎರಡು ಪಕ್ಕಗಳಲ್ಲಿಯೂ ಮತ್ತು ಹಿಂದೊಂದು ಜೇಬು ಇರಬೇಕು.

iii. **ತಲೆ ಟೋಪಿ :** ರಾಷ್ಟ್ರೀಯ ಸಂಸ್ಥೆ ಒದಗಿಸಿರುವ ಅಧಿಕೃತ ಪದಕ ಹೊಂದಿರುವ ಕಡು ನೀಲಿ ಬಣ್ಣದ ಬೆರ್ರೆ. ಸಿಖ್ಖರು ಅಧಿಕೃತ ಪದಕ ಸಹಿತವಾದ ನೀಲಿ ರುಮಾಲನ್ನು ಧರಿಸಬಹುದು.

ಸಮಾರಂಭಗಳಲ್ಲಿ ಶಿರೋಧಾರಣೆಯು ಕಡ್ಡಾಯವಾದುದು.

iv. **ಸೊಂಟಪಟ್ಟಿ :** ರಾಷ್ಟ್ರೀಯ ಸಂಸ್ಥೆಯವರು ಒದಗಿಸಿರುವ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧಿಕೃತ ಬಕಲ್ ಉಳ್ಳ ಬೂದು (ಗ್ರೇ) ಬಣ್ಣದ ನೈಲೆಕ್ಸ್ ಸೊಂಟ ಪಟ್ಟಿ.

v. **ಕಂಠ ವಸ್ತ್ರ :** ಹಸಿರು, ನೇರಳೆ ಮತ್ತು ಹಳದಿ ಬಣ್ಣಗಳನ್ನು ಹೊರತುಪಡಿಸಿ, ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯವರು ಅನುಮೋದಿಸಿದ ಗುಂಪಿನ ಬಣ್ಣ ಮತ್ತು ವಿನ್ಯಾಸ ಹೊಂದಿದ ತ್ರಿಕೋಣಾಕಾರದ ಕಂಠವಸ್ತ್ರವನ್ನು ಗಿಲ್‌ವೆಲ್ ವೋಗಲ್ ಹೊರತು ಪಡಿಸಿ ಇತರೆ ವೋಗಲ್‌ನೊಂದಿಗೆ ಕೊರಳ ಸುತ್ತ, ಕೊರಳ ಪಟ್ಟಿ ಮತ್ತು ಭುಜಪಟ್ಟಿಗಳ ಮೇಲೆ ಧರಿಸತಕ್ಕದ್ದು. ಕಂಠವಸ್ತ್ರದ ಎರಡು ಬಾಹುಗಳು, ಪ್ರತಿಯೊಂದೂ ಕನಿಷ್ಠ 70 ಸೆಂ.ಮೀ. ಮತ್ತು ಗರಿಷ್ಠ 80 ಸೆಂ.ಮೀ. ಇರತಕ್ಕದ್ದು.

vi. **ಭುಜ ಪದಕ :** 6 ರಿಂದ 8 ಸೆಂ.ಮೀ. ಉದ್ದ ಹಾಗೂ 1.5 ಸೆಂ.ಮೀ. ಅಗಲದ ಬಿಳಿ ಬಟ್ಟೆಯ ಮೇಲೆ ದಳದ/ಗುಂಪಿನ ಹೆಸರು ಮತ್ತು ಕ್ರಮ ಸಂಖ್ಯೆಯನ್ನು ಕೆಂಪು ಅಕ್ಷರಗಳಲ್ಲಿ ಬರೆದಿರುವ ಸ್ವಲ್ಪ ಬಾಗಿರುವ (ಬಿಲ್ಲಿನಾಕಾರ) ಭುಜಪದಕಗಳನ್ನು ಎರಡೂ ಭುಜಗಳ ಹೊಲಿಗೆಯ ಅಂಚಿನ ಕೆಳಗೆ ಧರಿಸಬೇಕು.

***ಸೂಚನೆ :*** ಸಾಗರ ಸ್ಕೌಟ್ ಮತ್ತು ವಾಯು ಸ್ಕೌಟ್‌ಗಳನ್ನು ಹೊಂದಿರುವ ಗುಂಪಿನ ಸದಸ್ಯರು ಭುಜ ಪದಕದ ಮೇಲೆ 'ಸಾಗರ ಸ್ಕೌಟ್' ಮತ್ತು 'ವಾಯು ಸ್ಕೌಟ್' ಎಂಬ ಪದಗಳನ್ನು ಸೇರಿಸಬಾರದು. ಬದಲಾಗಿ ರಾಷ್ಟ್ರೀಯ ಸಂಸ್ಥೆಯವರು ಒದಗಿಸಿರುವ 'ಸಾಗರ ಸ್ಕೌಟ್' ಅಥವಾ 'ವಾಯು

ಸ್ಕೌಟ್' ಎಂಬ ಪದಗಳನ್ನು ಕೆಂಪು ಬಣ್ಣದಲ್ಲಿ ಬರೆದಿರುವ ಬಿಳಿಬಣ್ಣದ ಪಟ್ಟಿಗಳನ್ನು ಎರಡೂ ಕಡೆ ಭುಜಪಟ್ಟಿಗಳ ಮೇಲೆ ಧರಿಸತಕ್ಕದ್ದು.

vii. **ಭುಜ ಪಟ್ಟಿಗಳು** : 'ಬಾಲಕರಿಗಾಗಿ ಸ್ಕೌಟಿಂಗ್' ಪುಸ್ತಕದಲ್ಲಿ ನಮೂದಿಸಿರುವಂತೆ ಪಟಾಲಂನ ಬಣ್ಣ ಮತ್ತು ಹೆಸರನ್ನು ಸೂಚಿಸುವ 5 ಸೆಂ.ಮೀ. ಉದ್ದ ಮತ್ತು 1.5 ಸೆಂ.ಮೀ. ಅಗಲ ಇರುವ ವರ್ಣಪಟ್ಟಿಗಳನ್ನು 2 ಸೆಂ.ಮೀ. ಅಂತರದಲ್ಲಿ ಬೂದು ಬಣ್ಣದ ಚೌಕಾಕೃತಿಯ ಬಟ್ಟೆಯ ಮೇಲೆ ಅಡ್ಡವಾಗಿ ಹೊಲಿದಿರಬೇಕು. ಈ ಪಟ್ಟಿಯನ್ನು ಭುಜಪದಕದ ಕೆಳಗೆ, ಎಡಭುಜದ ಮೇಲೆ ಧರಿಸಬೇಕು.

**ಸೂಚನೆ** : ಆ್ಯಂಬುಲೆನ್ಸ್‌ಮ್ಯಾನ್ ಪದಕ ಇದ್ದರೆ, ಆಗ ಭುಜ ಪಟ್ಟಿಗಳನ್ನು ಆ ಪದಕದ ಕೆಳಗೆ ಧರಿಸತಕ್ಕದ್ದು.

viii. **ಸದಸ್ಯತ್ವ ಪದಕ** : ಹಳದಿ ಬಣ್ಣದಲ್ಲಿ ಅಶೋಕ ಚಕ್ರವನ್ನು ಮಧ್ಯದಲ್ಲಿ ಒಳಗೊಂಡ, ತ್ರಿದಳಪತ್ರವನ್ನು ಮೇಲಿರಿಸಿದ ಹಳದಿ ಬಣ್ಣದ ತ್ರಿದಳ ಕಮಲ ಇರುವ, ಹಸಿರು ಹಿನ್ನೆಲೆಯ ಬಟ್ಟೆಯ ಪದಕವನ್ನು ಅಂಗಿಯ ಎಡಜೇಬಿನ ಪಟ್ಟಿಯ ಮಧ್ಯೆ ಧರಿಸಬೇಕು.

ix. **ಕಾಲುಚೀಲ ಅಥವಾ ಮೊಣಕಾಲು ಚೀಲ:** ಕಪ್ಪು ಕಾಲುಚೀಲ ಅಥವಾ ಮೊಣಕಾಲು ಚೀಲ ಧರಿಸಬಹುದು. ಲಾಡಿಪಟ್ಟಿಯ (Garter Tabs) ನೀಲಿ ಚುಂಗು 1 ಸೆಂ.ಮೀ. ಹೊರಗೆ ಕಾಲುಗಳ ಹೊರ ಭಾಗದಲ್ಲಿ ಕಾಣುವಂತೆ ಮೊಣಕಾಲು ಚೀಲಗಳನ್ನು ಮೊಣಕಾಲಿನಿಂದ ಕೆಳಗೆ ಮಡಿಸಿರಬೇಕು ಮೊಣಕಾಲುಚೀಲಗಳನ್ನು ನಿಕ್ಕರ್‌ನೊಂದಿಗೆ ಮಾತ್ರ ಧರಿಸಬೇಕು.

x. **ವಿಶ್ವ ಸ್ಕೌಟ್ ಪದಕ** : ಸಮವಸ್ತ್ರದ ಬಲ ಜೇಬಿನ ಪಟ್ಟಿಯ ಮಧ್ಯಭಾಗದಲ್ಲಿ ವಿಶ್ವ ಸ್ಕೌಟ್ ಪದಕವನ್ನು ಧರಿಸತಕ್ಕದ್ದು.

xi. **ಪಾದರಕ್ಷೆಗಳು** : ಲೇಸ್ ಇರುವ ಕಪ್ಪು ಷೂಗಳನ್ನು (ಚರ್ಮ ಅಥವಾ ಕ್ಯಾನ್‌ವಾಸ್) ಧರಿಸಬಹುದು.

xii. **ಮೇಲಂಗಿ, ಬ್ಲೇಸರ್ ಅಥವಾ ಜಾಕೆಟ್** : ಸಾಗರ ನೀಲಿ ಬಣ್ಣದ ಮೇಲಂಗಿ ಅಥವಾ ಸಾಗರ ನೀಲಿ ಬಣ್ಣದ ಬ್ಲೇಸರ್ ಅಥವಾ ಸಾಗರ ನೀಲಿ ಬಣ್ಣದ ಜಾಕೆಟ್ ಅನ್ನು ಚಳಿಗಾಲದಲ್ಲಿ ಮಾತ್ರ ಧರಿಸಬಹುದು.

xiii. **ಲೋಹ ಪದಕ** : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಲೋಹದ ಪದಕವನ್ನು ಸಾದಾ ಉಡುಪಿನಲ್ಲಿ ಧರಿಸಬಹುದು.

xiv. **ಶೀಟಿಯ ದಾರ** : ಬೂದುಬಣ್ಣದ ಶೀಟಿಯ ದಾರವನ್ನು ಕೊರಳ ಸುತ್ತ ಧರಿಸಿ ಶೀಟಿಯನ್ನು ಎಡಜೇಬಿನಲ್ಲಿ ಇಳಿಬಿಡತಕ್ಕದ್ದು, ಸೂಕ್ತ ಅಳತೆಯ ಮೂರು ಮೀಟರ್ ಉದ್ದದ ಗಂಟು ಹಾಕುವ ದಾರವನ್ನು ಸಮವಸ್ತ್ರದೊಂದಿಗೆ ಧರಿಸತಕ್ಕದ್ದು.

xv. ಹೊರಾಂಗಣ ಚಟುವಟಿಕೆಗಳಲ್ಲಿ ಬಗಲಿನ ಚೀಲ ಅಥವಾ ಹೆಗಲಿನ ಚೀಲ ಧರಿಸಬಹುದು.

xvi. ನಾಮಪಟ್ಟಿ: ರಾಷ್ಟ್ರೀಯ ಕೇಂದ್ರ ಕಚೇರಿಯು ವಿನ್ಯಾಸಗೊಳಿಸಿರುವ ಮತ್ತು ಒದಗಿಸಿರುವ "The Bharat Scouts and Guides" ಎಂಬ ಅಕ್ಷರಗಳನ್ನುಳ್ಳ ನಾಮಪಟ್ಟಿಯನ್ನು ಬಲ ಜೇಬಿನ ಮೇಲೆ ಧರಿಸಬೇಕು. ಈ ಪಟ್ಟಿಯ ಅಳತೆಯ 11 ಸೆಂ.ಮೀ. x 2 ಸೆಂ.ಮೀ. ಆಗಿದ್ದು ಬಲಮೂಲೆಯಲ್ಲಿ 2 ಸೆಂ.ಮೀ. x 3 ಸೆಂ.ಮೀ. ಅಳತೆಯಲ್ಲಿ ರಾಷ್ಟ್ರ ಧ್ವಜದ ತ್ರಿವರ್ಣ ಹೊಂದಿದ್ದು, ಉಳಿದ ಭಾಗ ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಬರಹಕ್ಕಾಗಿ ಇರುತ್ತದೆ.

### ಸಾಗರ ಸ್ಕೌಟ್‌ಗಳ ಸಮವಸ್ತ್ರ

ಸಾಗರ ಸ್ಕೌಟ್‌ಗಳು ಒಬ್ಬ ಸ್ಕೌಟ್ ನಂತೆಯೇ ಸಮವಸ್ತ್ರವನ್ನು ಧರಿಸುವುದು. ಜೊತೆಗೆ ಸಾಗರ ಸ್ಕೌಟ್ ಪದಕವನ್ನು ಬಲಜೇಬಿನ ಮೇಲ್ಭಾಗದಲ್ಲಿ 4 ಸೆಂ.ಮೀ. ಅಂತರದಲ್ಲಿ ಧರಿಸತಕ್ಕದ್ದು.

### ವಾಯು ಸ್ಕೌಟ್‌ನ ಸಮವಸ್ತ್ರ

ವಾಯು ಸ್ಕೌಟ್ ಒಬ್ಬ ಸ್ಕೌಟ್‌ನಂತೆಯೇ ಸಮವಸ್ತ್ರವನ್ನು ಧರಿಸಬೇಕು. ಜೊತೆಗೆ 'ವಾಯು ಸ್ಕೌಟ್ ಪದಕ'ವನ್ನು ಬಲಜೇಬಿನ ಮೇಲ್ಭಾಗದಲ್ಲಿ 4 ಸೆಂ.ಮೀ. ಅಂತರ ದಲ್ಲಿ ಧರಿಸತಕ್ಕದ್ದು.

### ಸಾಂದರ್ಭಿಕ ಉಡುಪುಗಳು

ಕಡು ನೀಲಿ ಬಣ್ಣದ ಜೀನ್ಸ್ / ಪ್ಯಾಂಟ್ / ಷಾರ್ಟ್ಸ್, ಕಂಠಪಟ್ಟಿ ಉಳ್ಳ, BSG ಮುದ್ರೆ ಹೊಂದಿದ ಜೇಬುಳ್ಳ, ಸಾಗರ ನೀಲಿ ಬಣ್ಣದ ಟೀ ಷರ್ಟ್ ಮತ್ತು BSG ಲಾಂಛನ ಹೊಂದಿ ಕಡುನೀಲಿ ಬಣ್ಣದ 'ಪಿ' ಕ್ಯಾಪನ್ನು ಕಪ್ಪು ಬಣ್ಣದ ಹಿತವಾದ ಷೂಗಳೊಂದಿಗೆ ಕಾರ್ಯನಿರತ ಸಮವಸ್ತ್ರವಾಗಿ / ಕ್ಷೇತ್ರಚಟುವಟಿಕೆಗಳಿಗೆ ಐಚ್ಛಿಕವಾಗಿ ಧರಿಸಬಹುದು.

## 9. ಸ್ಕೌಟ್‌ನ ಪ್ರಗತಿಪರ ಯೋಜನೆ

ಕನಿಷ್ಠ ಮೂರು ತಿಂಗಳುಗಳ ಕಾಲ ಕಾರ್ಯನಿರ್ವಹಿಸಿದ ಮತ್ತು ನಾಲ್ಕು ದಳ ಸಭೆಗಳಲ್ಲಿ ಭಾಗವಹಿಸಿದ ಸ್ಕೌಟ್ ಆಕಾಂಕ್ಷಿಯು, ಪ್ರವೇಶ ಪರೀಕ್ಷೆಗಳನ್ನು ಪೂರೈಸಿದ ನಂತರ ಸ್ಕೌಟ್ ಆಗಿ ದೀಕ್ಷೆ ಹೊಂದಬಹುದು.

i. ಒಬ್ಬ ಪ್ರವೇಶ್ ಸ್ಕೌಟ್‌ನು ಕನಿಷ್ಠ ಆರು ತಿಂಗಳು ಕಾರ್ಯ-ನಿರ್ವಹಿಸಿ ಪ್ರಥಮ ಸೋಪಾನ್‌ಗೆ ಅರ್ಹತೆ ಪಡೆಯುತ್ತಾನೆ.

ii. ಒಬ್ಬ ಪ್ರಥಮ ಸೋಪಾನ್ ಸ್ಕೌಟ್‌ನು ಕನಿಷ್ಠ ಆರು ತಿಂಗಳು ಕಾರ್ಯನಿರ್ವಹಿಸಿ ದ್ವಿತೀಯ ಸೋಪಾನ್‌ಗೆ ಅರ್ಹತೆ ಪಡೆಯುತ್ತಾನೆ.

iiii. ಒಬ್ಬ ದ್ವಿತೀಯ ಸೋಪಾನ್ ಸ್ಕೌಟ್‌ನು ಕನಿಷ್ಠ ಆರು ತಿಂಗಳು ಕಾರ್ಯನಿರ್ವಹಿಸಿ, ತೃತೀಯ ಸೋಪಾನ್‌ಗೆ ಅರ್ಹತೆ ಪಡೆಯುತ್ತಾನೆ

iv. ತೃತೀಯ ಸೋಪಾನ್ ಸ್ಕೌಟ್‌ನು ಕನಿಷ್ಠ ಒಂಭತ್ತು ತಿಂಗಳುಗಳ ಕಾಲ ಕಾರ್ಯನಿರ್ವಹಿಸಿ ರಾಜ್ಯಪುರಸ್ಕಾರ ಪದಕಕ್ಕೆ ಅರ್ಹತೆ ಪಡೆಯುತ್ತಾನೆ.

v. ರಾಜ್ಯ ಪುರಸ್ಕಾರ ಸ್ಕೌಟ್‌ನು ರಾಷ್ಟ್ರಪತಿ ಸ್ಕೌಟ್ ಪರೀಕ್ಷೆ ತೆಗೆದುಕೊಳ್ಳುವ ಮುನ್ನ 12 ತಿಂಗಳುಗಳ ಕಾಲ ಕಾರ್ಯ ನಿರ್ವಹಿಸಿರತಕ್ಕದ್ದು.

vi. **ದಕ್ಷತಾ ಹುರಿಗಳು**

(1) ದಕ್ಷತಾ ಹುರಿಗಳನ್ನು ಷಿಫಾನ್ ನೂಲಿನಿಂದ ವಿಶೇಷ ರೀತಿಯಲ್ಲಿ ರಾಷ್ಟ್ರೀಯ ಕಾರ್ಯಾಲಯದವರು ವಿನ್ಯಾಸಗೊಳಿಸಿರುತ್ತಾರೆ. ಅದನ್ನು ಬಲ ಭುಜದ ಪಟ್ಟಿಯೊಳಗೆ ಧರಿಸಿ, ಬಲ ಜೇಬಿನ ವರೆಗೆ ಇಳಿಬಿಟ್ಟು, ಬಿ.ಎಸ್. ಅಂಡ್ ಜಿ. ಪಟ್ಟಿಯ ಮೇಲೆ ಅಡ್ಡಡ್ಡ ಹೊಲಿಯಬೇಕು.

(2) ದ್ವಿತೀಯ ಸೋಪಾನ್ ಪದಕದ ನಂತರ, ಒಬ್ಬ ಸ್ಕೌಟನು ಹೆಚ್ಚು ಪ್ರಾವೀಣ್ಯತಾ ಪದಕಗಳನ್ನು ಗಳಿಸಬಹುದು.

(3) ದ್ವಿತೀಯ ಸೋಪಾನ್ ಸ್ಕೌಟನು ಆರು ಪ್ರಾವೀಣ್ಯತಾ ಪದಕಗಳನ್ನು ಗಳಿಸಿದರೆ, ಆಗ ಸಹಾಯಕ ಜಿಲ್ಲಾ ಆಯುಕ್ತರು ನೀಲಿ ಹುರಿಯನ್ನು ನೀಡುತ್ತಾರೆ.

(4) ತೃತೀಯಾ ಸೋಪಾನ್ ಸ್ಕೌಟನು ಹನ್ನರಡು ಪ್ರಾವೀಣ್ಯದ ಪದಕಗಳನ್ನು ಪಡೆದರೆ, ಆಗ ಜಿಲ್ಲಾ ಆಯುಕ್ತರು ಹಸಿರು ಹುರಿಯನ್ನು ನೀಡುತ್ತಾರೆ.

(5) ರಾಜ್ಯ ಪುರಸ್ಕಾರ ಸ್ಕೌಟನು ಹದಿನೆಂಟು ಪ್ರಾವೀಣ್ಯತಾ ಪದಕಗಳನ್ನು ಗಳಿಸಿದರೆ, ಆಗ ಜಿಲ್ಲಾ ಮುಖ್ಯ ಆಯುಕ್ತರು ಸುವರ್ಣ ಹುರಿ ನೀಡುತ್ತಾರೆ.

viii. **ಜಂಗಲ್ ಗಾಫ್ :**

ಅ. ರಾಷ್ಟ್ರಪತಿ ಸ್ಕೌಟ್ ಬಳಿಕ, ಒಬ್ಬ ಸ್ಕೌಟ್, ಜಂಗಲ್ ಗಾಫ್ ಹುರಿಯನ್ನು ಪಡೆಯಲು ಅರ್ಹನು. ಇದನ್ನು ಜಿಲ್ಲಾ ಮುಖ್ಯ ಆಯುಕ್ತರು ಪ್ರದಾನ ಮಾಡುತ್ತಾರೆ.

ಆ. ಈ ಕೆಳ ಕಾಣಿಸಿರುವ ಪ್ರವೀಣತಾ ಪದಕಗಳ ಪೈಕಿ ಈ

ಹಿಂದೆಗಳಿಸಿರದ 5 ಪದಕಗಳನ್ನು ಅವನು ಗಳಿಸಬೇಕು.

ಕಗ್ಗಾಡು ಜೀವಿ; ನಾಗರಿಕ ರಕ್ಷಣೆ; ನಕ್ಷೆ ತಯಾರಕ; ಬಿಲ್ಲುಗಾರ; ಹವಾಮಾನ ತಜ್ಞ; ಶಿಬಿರ ವಾಸಿ; ಆರೋಹಿ; ಅಗ್ರಗಾಮಿ; ಸಂರಕ್ಷಕ; ಸಂಕೇತಗಾರ; ಅನ್ವೇಷಕ; ಮೂಲಿಕಾ ತಜ್ಞ; ಚಾರಣಿಗ; ಪ್ರಕೃತಿ ತಜ್ಞ; ಮರಸುಬೇಟೆಗಾರ; ಜಾದುಗಾರ; ಅಗ್ನಿಶಾಮಕ ಮತ್ತು ಈಜುಗಾರ.

ಇ. ಜಂಗಲ್ ಗಾಫ್ ಹುರಿಯು ಆಲಿವ್ ಹಸಿರು ಬಣ್ಣದಲ್ಲಿ-ರುತ್ತದೆ. ಇದನ್ನು ಚಿನ್ನದ ಹುರಿಯ ಬದಲು ಅದೇ ಜಾಗದಲ್ಲಿ ಧರಿಸಬೇಕು.

## 10. ಪ್ರಥಮ ಸೋಪಾನ್ ಪರೀಕ್ಷೆ




1. ನಿಮ್ಮನ್ನು ನೀವು ನೋಡಿಕೊಳ್ಳುವುದು –

   ಅ. "ಮನೆಯಲ್ಲಿ ನಿಮ್ಮ ಕರ್ತವ್ಯ-ಗಳನ್ನು" ನಿಖರವಾಗಿ ಹೇಳಬೇಕು.

   ಆ. ನಿಮ್ಮ ಹಾಸಿಗೆಯನ್ನು ನೀವೇ ಮಾಡಿಕೊಳ್ಳಬೇಕು.

   ಇ. ವೈಯಕ್ತಿಕ ಸ್ವಚ್ಛತೆಯ ವಿಷಯದಲ್ಲಿ ಆರೋಗ್ಯ ನಿಯಮಗಳನ್ನು ತಿಳಿದಿರಬೇಕು.

   ಈ. ಬಿ.ಪಿ. ರವರ ಆರು ವ್ಯಾಯಾಮ ಕಲಿಯಬೇಕು ಮತ್ತು ಆರು ಯೋಗಾಸನಗಳು ಅಥವಾ ಸೂರ್ಯನಮಸ್ಕಾರ ಅಭ್ಯಾಸ ಮಾಡಬೇಕು.

   ಉ. ಗುಂಡಿ ಹೊಲಿಯಬೇಕು.

   ಊ. ಕ್ಯಾನ್ ವಾಸ್/ಚರ್ಮದ ಷೂ ಚೊಕ್ಕಟಗೊಳಿಸಿ ಪಾಲಿಷ್ ಮಾಡಬೇಕು.

   ಋ. ನಿಮ್ಮದೇ ಸ್ವಂತ ಪ್ರಥಮ ಚಿಕಿತ್ಸೆ ಪೆಟ್ಟಿಗೆ ಮಾಡಿಕೊಳ್ಳಬೇಕು. ಅದರೊಳಗಿನ ವಸ್ತುಗಳು ತಿಳಿದಿರಬೇಕು.

   ೠ. ಪ್ರಥಮ ಚಿಕಿತ್ಸೆ ಎಂಬುದರ ವಿವರಣೆ ಹಾಗೂ ಅದರ ಸುವರ್ಣ ಸೂತ್ರಗಳನ್ನು (Golden Rules) ತಿಳಿದಿರಬೇಕು.

**2. ಶಿಸ್ತು :**

   ಅ. ನಿಮ್ಮ ಪಟಾಲಂ. ಅದರ ಪತಾಕೆ, ಉದ್ಘೋಷಣೆ ಅಥವಾ ಹಾಡು, ಪಟಾಲಂ ಮೂಲೆ ಮತ್ತು ಪಟಾಲಂ ಕರೆ ಬಗ್ಗೆ ತಿಳಿಯುವುದು. ಮತ್ತು ಪಟಾಲಂ ಪರಿಷತ್ತಿನಲ್ಲಿ ಭಾಗವಹಿಸುವುದು.

**ಆ.** ಹಸ್ತ ಮತ್ತು ಶೀಟಿ ಸಂಕೇತಗಳನ್ನು ಕಲಿತು ಅಭ್ಯಸಿಸಬೇಕು.

**ಇ.** ಪಾದಕವಾಯತು : ಸಾವಧಾನ್, ವಿಶ್ರಾಂ, ಆರಾಂಸೇ, ದಹಿನೇ, ಬಾಯೇ ಮತ್ತು ಪೀಛೇ ಮೂಡ್.

**ಈ.** ದಳದ ಮತ್ತು ಪಟಾಲಂ ಆಟಗಳಲ್ಲಿ ಭಾಗವಹಿಸುವುದು.

**3 ಹಗ್ಗದ ಕಾರ್ಯ –**

ಅ. ಹಗ್ಗದ ತುದಿಗಳಿಗೆ ಹುರಿ ಸುತ್ತುವುದು.

ಆ. ಸಮಗಂಟು, ಮೂಲೆ ಗಂಟು, ಕೊಟ್ಟಿಗೆ ಗಂಟು, ಬೆಸ್ತರ ಗಂಟು, ಕಣಕಾಲು ಗಂಟು, ಕುಣಿಕೆ ಗಂಟು ಹಾಗೂ ಸುತ್ತೊಂದು ಎರಡು ಮಲುಕು ಗಂಟುಗಳನ್ನು ಹಾಕುವುದು ಮತ್ತು ಅವುಗಳ ಉಪಯೋಗ ತಿಳಿದಿರಬೇಕು.

ಇ. ಕತ್ತರಿ ಕಟ್ಟು i ಮತ್ತು ಕತ್ತರಿ ಕಟ್ಟು ii ಇವುಗಳನ್ನು ಕಟ್ಟಿ ಪ್ರದರ್ಶಿಸಬೇಕು.

ಈ. ಮನೆಯಲ್ಲಿ ಉಪಯುಕ್ತವಾಗುವ ಸುಧಾರಿತ ಉಪಕರಣ ಅಥವಾ ಕರಕುಶಲವಸ್ತುವನ್ನು ತಯಾರಿಸಬೇಕು.

**4 ಸೇವೆ –**

ಅ. ನಿಮ್ಮ ಸ್ಕೌಟ್ ಮಾಸ್ಟರ್ ಮಾರ್ಗದರ್ಶನದಲ್ಲಿ ನಿಮ್ಮ ಶಾಲೆ ಅಥವಾ ಸ್ಕೌಟ್ ಕೇಂದ್ರದ ಕ್ಷೇತ್ರದಲ್ಲಿ ದಳದ ಸೇವಾ ಯೋಜನೆಯನ್ನು ಕಾರ್ಯಗತಗೊಳಿಸಿ.

ಆ. ಸರಳವಾದ ಕತ್ತರಿಸಿದಗಾಯ, ಸುಟ್ಟಗಾಯ ಮತ್ತು ಮೂಗಿನಿಂದ ರಕ್ತಸ್ರಾವಗಳಿಗೆ ಚಿಕಿತ್ಸೆ ಮಾಡಬೇಕು.

ಇ. ಮನೆಯ ಜವಾಬ್ದಾರಿಗಳಾದ ಅಡಿಗೆ ಮಾಡುವುದು, ನೀರು ತುಂಬಿಸುವುದು, ಅತಿಥಿ ಸತ್ಕಾರ, ಸ್ವಚ್ಛತೆ ಇವೇ ಮುಂತಾದ ಕೆಲಸಗಳನ್ನು, ತಾಯಿ–ತಂದೆಯರ ಸಹಾಯದಿಂದ ಒಂದು ವಾರ ಕಾಲ ನಿರ್ವಹಿಸಬೇಕು.

ಈ. ಈ ಕೆಳಗಿನ ಚಟುವಟಿಕೆಗಳಲ್ಲಿ ಭಾಗವಹಿಸಬೇಕು.

i. ನಿಮ್ಮ ಸ್ಕೌಟ್ ಮಾಸ್ಟರೊಡನೆ ಚರ್ಚಿಸಿ, ಸ್ಕೌಟ್ ನಿಯಮದ ಯಾವುದಾದರೂ ಒಂದು ಅಂಶವನ್ನು ಒಳಗೊಂಡಿರು–ವಂತೆ ಸೇವೆಯನ್ನು ಸಲ್ಲಿಸಿ, ಅವರಿಗೆ ವರದಿ ಒಪ್ಪಿಸಬೇಕು.

ii. ನಿಮ್ಮ ಪಟಾಲಂ ನಾಯಕನೊಡನೆ ಚರ್ಚಿಸಿ, ನಿಸರ್ಗ ಯೋಜನೆ ಒಂದನ್ನು ಕೈಗೊಂಡು, 10 ದಿನಗಳೊಳಗೆ ವರದಿ ಒಪ್ಪಿಸಬೇಕು.

ಅಥವಾ

ಸಾರ್ವಜನಿಕ ಸಂಸ್ಥೆಗಳಾದ ಗ್ರಾಮ ಪಂಚಾಯಿತಿ ಸಮಿತಿ/ ಕ್ಷೇತ್ರಾಭಿವೃದ್ಧಿ ಕಾರ್ಯಾಲಯ/ ಪುರಸಭಾ ಕಾರ್ಯಾಲಯ/ ನಗರಸಭೆ ಇವುಗಳಲ್ಲೊಂದಕ್ಕೆ ಭೇಟಿ ನೀಡಿ, ಅವು ಸಲ್ಲಿಸುವ ಸೇವೆಯ ಬಗ್ಗೆ ತಿಳಿದು, ಆ ಬಗ್ಗೆ ನಿಮ್ಮ ಸ್ಕೌಟ್ ಮಾಸ್ಟರಿಗೆ 10 ದಿನಗಳೊಳಗೆ ವರದಿ ಒಪ್ಪಿಸಬೇಕು.

**5. ಸಂವಹನ :**

ಪಿ.ಸಿ.ಓ. ಮತ್ತು ಮೊಬೈಲ್ ಫೋನುಗಳನ್ನು ಬಳಸಲು ಬರಬೇಕು ಮತ್ತು ಅವುಗಳಲ್ಲಿರಬಹುದಾದ ಹಲವಾರು ಸೌಲಭ್ಯಗಳ ಬಗ್ಗೆ ಪರಿಚಯವಿರಬೇಕು.

**6. ಹೊರಾಂಗಣ :**

ಅ. ಸರಳವಾದ ಅರಣ್ಯ ಕೌಶಲ ಸಂಕೇತಗಳನ್ನರಿತವನಾಗಿ, ತನ್ನ ಪಟಾಲಂ ಜೊತೆ ಕನಿಷ್ಠ 1/2 ಕಿ.ಮೀ. ದೂರ ಜಾಡು ಅನುಸರಿಸಬೇಕು.

ಆ. ಪಾದಚಾರಿಗಳು ಅನುಸರಿಸಬೇಕಾದ ರಸ್ತೆಯ ಸುರಕ್ಷತಾ ನಿಯಮಗಳನ್ನು ತಿಳಿದು ಪಾಲಿಸಬೇಕು

ಇ. ನಿಸರ್ಗ ಅಧ್ಯಯನ ಸಂಚಾರದಲ್ಲಿ ಭಾಗವಹಿಸಬೇಕು.

**ಸೂಚನೆ :** 1) ಪರೀಕ್ಷಕನಾಗಿ ಕಾರ್ಯ ನಿರ್ವಹಿಸಿದ ಸ್ಕೌಟ್ ಮಾಸ್ಟರ್‌ನ ಶಿಫಾರಸ್ಸಿನ ಮೇರೆಗೆ, ಪ್ರಥಮ ಸೋಪಾನ್ ಪರೀಕ್ಷೆಗಳನ್ನು ಯಶಸ್ವಿಯಾಗಿ ಪೂರೈಸಿದ ಸ್ಕೌಟ್‌ಗೆ, ಸ್ಥಳೀಯ ಸಂಸ್ಥೆ ಅಥವ ಜಿಲ್ಲಾ ಸಂಸ್ಥೆಯವರು ಪ್ರಥಮ ಸೋಪಾನ್ ಪದಕವನ್ನು ನೀಡುತ್ತಾರೆ.

2) 'ತಯ್ಯಾರ್' ಎಂಬ ಪದವನ್ನು ದೇವನಾಗರಿ ಲಿಪಿಯಲ್ಲಿ ಬರೆದಿರುವ ಅಲಂಕಾರಿಕ ಪಟ್ಟಿಯು ಪ್ರಥಮ ಸೋಪಾನ್ ಪದಕವಾಗಿರುತ್ತದೆ. ಇದನ್ನು ಎಡತೋಳಿನ ಮಧ್ಯೆ ಮೊಳಕೈ ಮತ್ತು ಭುಜದ ನಡುವೆ ಧರಿಸುವುದು.

**ಸಾಗರ ಸ್ಕೌಟ್**

ಸಾಗರ ಸ್ಕೌಟ್ ಆದವನು ಈ ಮೇಲಿನ ಪರೀಕ್ಷಾಂಶಗಳ ಜೊತೆಗೆ ಈ ಕೆಳ ಕಂಡವುಗಳಲ್ಲಿ ಅರ್ಹತೆ ಗಳಿಸಬೇಕು.

1. ಸಾಗರ ಸ್ಕೌಟಿಂಗ್ ಬಗ್ಗೆ ಸಾಮಾನ್ಯ ಜ್ಞಾನ ಹೊಂದಿರಬೇಕು.
2. ನೀರಿನ ಬಗ್ಗೆ ಸುರಕ್ಷತಾ ಮುನ್ನೆಚ್ಚರಿಕೆಗಳನ್ನು ತಿಳಿದಿರಬೇಕು.
3. ನೀರಿನ ಬಗ್ಗೆ ಭಯವನ್ನು ಬಿಡಬೇಕು.

## ವಾಯು ಸ್ಕೌಟ್

ವಾಯು ಸ್ಕೌಟ್ ಆದವನು ಮೇಲಿನ ಪರೀಕ್ಷಾಂಶಗಳ ಜೊತೆಗೆ ಈ ಕೆಳ ಕಂಡವುಗಳಲ್ಲಿ ಅರ್ಹತೆ ಪಡೆಯಬೇಕು.

1. ವಾಯು ಸ್ಕೌಟಿಂಗ್ ಬಗ್ಗೆ ಸಾಮಾನ್ಯ ಮಾಹಿತಿ ತಿಳಿದಿರಬೇಕು.
2. ಕನಿಷ್ಠ ಹತ್ತು ಬಗೆಯ ವಿಮಾನಗಳ ಛಾಯಾಚಿತ್ರ ಅಥವಾ ಚಿತ್ರಗಳನ್ನು ಸಂಗ್ರಹಿಸಬೇಕು.
3. ನಮ್ಮ ದೇಶದ ವಾಯುದಳ, ಅದರ ದರ್ಜೆಗಳು, ಪದಕಗಳು ಮತ್ತು ಧ್ವಜದ ಬಗ್ಗೆ ಸಾಮಾನ್ಯ ರೀತಿಯ ಮಾಹಿತಿ ತಿಳಿದಿರಬೇಕು.
4. ನಮ್ಮ ದೇಶದ ವಾಯುಪಡೆ/ನಾಗರಿಕ ವಿಮಾನಯಾನದಲ್ಲಿ ಬಳಸುವ, ಕನಿಷ್ಠ ಹತ್ತು ಬಗೆಯ ವಿಮಾನಗಳನ್ನು ಗುರುತಿಸಬೇಕು.
5. ಸ್ಕೌಟ್ ಮಾಸ್ಟರ್ ನಿಗದಿಗೊಳಿಸಿದ ಅವಧಿಯೊಳಗೆ ತಾನು ನೋಡಿದ ವಿಮಾನಗಳ ಬಗ್ಗೆ ದರಖಾಸ್ತು ಪುಸ್ತಕ (ಲಾಗ್ ಬುಕ್) ತಯಾರಿಸಬೇಕು.

## 11. ದ್ವಿತೀಯ ಸೋಪಾನ್ ಪರೀಕ್ಷೆಗಳು

### 1. ಅಗ್ರಾಮಿತ್ವ




ಅ. ದಿಮ್ಮಿಗಂಟು (Timber hitch) ಉರುಳು ಗಂಟು, (Rolling hitch) ಸನ್ನೆ ಗಂಟು, (Marline spike or Lever hitch) '8', ಆಕಾರದ ಗಂಟು. ಇವುಗಳನ್ನು ಹಾಕಿ ತೋರಿಸಬೇಕು. ಉಪಯೋಗ ತಿಳಿಸಬೇಕು.

ಆ. ಚೌಕಕಟ್ಟು, (Square lashing) 8 ಆಕಾರದ ಕಟ್ಟು ಇವುಗಳನ್ನು ಹಾಕಿ ತೋರಿಸಬೇಕು. ಮತ್ತು ಉಪಯೋಗ ತಿಳಿದಿರಬೇಕು.

ಇ. ಕೈಗೊಡಲಿ ಅಥವಾ ಮಚ್ಚು ಇವುಗಳ ಉಪಯೋಗವನ್ನು ಪ್ರದರ್ಶಿಸಬೇಕು. ಸುರಕ್ಷತಾ ನಿಯಮ ತಿಳಿದಿರಬೇಕು ಮತ್ತು ಇವುಗಳನ್ನು ಹರಿತವಾಗಿಡುವುದು ತಿಳಿದಿರಬೇಕು.

ಈ. ಚೂರಿ, ಚಾಕುಗಳನ್ನು ಹರಿತ ಮಾಡುವುದು ತಿಳಿದಿರಬೇಕು. ಅವುಗಳ ಉಪಯೋಗ, ಅನುಸರಿಸಬೇಕಾದ ಸುರಕ್ಷತಾ ನಿಯಮ ತಿಳಿದಿರಬೇಕು. ಸ್ಕ್ರೂ ಡ್ರೈವರ್, ಪ್ಲೈಯರ್ ಮತ್ತು ಸುತ್ತಿಗೆ ಉಪಯೋಗ ತಿಳಿದಿರಬೇಕು.

## 2. ಬೆಂಕಿ

ಅ. ಶಿಬಿರಗಳು / ಹೊರ ಸಂಚಾರ ವೇಳೆ ಉಪಯೋಗಿಸುವ ವಿವಿಧ ರೀತಿಯ ಬೆಂಕಿ ಒಲೆಗಳು ತಿಳಿದಿರಬೇಕು.

ಆ. ಹೊರಾಂಗಣದಲ್ಲಿ ಕಟ್ಟಿಗೆಯನ್ನು ಜೋಡಿಸಿ, ಎರಡಕ್ಕಿಂತ ಹೆಚ್ಚಿಲ್ಲದ ಬೆಂಕಿ ಕಡ್ಡಿಗಳಿಂದ ಬೆಂಕಿ ಮಾಡಬೇಕು.

## 3. ಅಡಿಗೆ

ಅ. ಸೀಮೆ ಎಣ್ಣೆ / ಒತ್ತಡದ ಒಲೆ (Pressure Stove) ಅಥವಾ ಅನಿಲ ಒಲೆ (Gas Stove) ಇವುಗಳು ಕೆಲಸ ಮಾಡುವ ರೀತಿ ಮತ್ತು ಅವುಗಳನ್ನು ದುರಸ್ತಿನಲ್ಲಿಟ್ಟುಕೊಳ್ಳುವುದು ತಿಳಿದಿರಬೇಕು.

ಆ. ಹೊರಾಂಗಣದಲ್ಲಿ ಇಬ್ಬರಿಗಾಗುವಷ್ಟು ಎರಡು ಸರಳ ಖಾದ್ಯಗಳನ್ನು ತಯಾರಿಸಬೇಕು. ಮತ್ತು ಟೀ/ಕಾಫಿ ಮಾಡಬೇಕು.

ಇ. ಅನಿಲ ಸೋರಿಕೆಯಾದರೆ, ಅನುಸರಿಸಬೇಕಾದ ಸುರಕ್ಷತಾ ಕ್ರಮ ತಿಳಿದಿರಬೇಕು.

## 4. ದಿಕ್ಸೂಚಿ ಮತ್ತು ನಕ್ಷೆ

ಅ. ದಿಕ್ಸೂಚಿಯ 16 ದಿಕ್ಕುಗಳನ್ನು ತಿಳಿದಿರಬೇಕು.

ಆ. ರಾತ್ರಿಯ ವೇಳೆ ಕನಿಷ್ಠ ಎರಡು ನಕ್ಷತ್ರ ರಾಶಿಗಳ ಸಹಾಯದಿಂದ ಉತ್ತರ ದಿಕ್ಕನ್ನು ಕಂಡುಹಿಡಿಯಲು ಸಮರ್ಥನಿರಬೇಕು.

ಇ. ನೀವಿರುವ ಸ್ಥಳದಿಂದ, ದಿಕ್ಸೂಚಿಯನ್ನುಪಯೋಗಿಸಿ, ವಿವಿಧ ವಸ್ತುಗಳ ಕೋನಾಂತರವನ್ನು ಕಂಡು ಕೊಳ್ಳಲು ತಿಳಿದಿರಬೇಕು.

ಈ. ದಿಕ್ಸೂಚಿ ಕೋನಾಂತರ ಮತ್ತು ದೂರಗಳನ್ನುಪಯೋಗಿಸಿ, ಗುರುತು ಹಾಕಿರುವ ಜಾಡನ್ನು ಅನುಸರಿಸಬೇಕು.

ಉ. ಪ್ರಮಾಣ (Scale), ದಿಕ್ಕು (Direction), ಸಾಂಪ್ರದಾಯಿಕ ಚಿಹ್ನೆ (Conventiona signs), ಸಮಪಾತಳಿ ರೇಖೆ (Contours), ಜಾಲ ಸೂಚಕ, (Grid reference), ಈ ಪದಗಳ ಅರ್ಥ ತಿಳಿದಿರಬೇಕು.

ಊ. ಪ್ರವಾಸೀ ನಕ್ಷೆಯನ್ನು ಉಪಯೋಗಿಸಲು ಶಕ್ತನಿರಬೇಕು.

## 5. ಪ್ರಥಮ ಚಿಕಿತ್ಸೆ

ಅ. ಗಾಯಗಳ ಬಗ್ಗೆ ತಿಳಿದಿರಬೇಕು. ಸುಟ್ಟಗಾಯ ಮತ್ತು ಬೆಂದಗಾಯಗಳಿಗೆ, ಉಳುಕು, ಕುಟುಕು ಮತ್ತು ಕಡಿತ, ರಕ್ತಸ್ರಾವ ಇವುಗಳಿಗೆ ಪ್ರಥಮ ಚಿಕಿತ್ಸೆ ಮಾಡಬೇಕು.

ಆ. ರೋಲರ್ ಬ್ಯಾಂಡೇಜ್ ಉಪಯೋಗ ತಿಳಿದು ಪ್ರದರ್ಶಿಸಬೇಕು.

ಇ. ಮುಮ್ಮೂಲೆ ಪಟ್ಟಿಯನ್ನುಪಯೋಗಿಸಿ ತಲೆ, ಕೈ, ಮಂಡಿ, ಪಾದ ಕೀಲು ಮತ್ತು ತೋಳಿನ ಮೂಳೆ ಮುರಿತಗಳಿಗೆ ಕಟ್ಟು ಹಾಕಲು ಬರಬೇಕು.

ಈ. ಸುಧಾರಿತ ಡೋಲಿ ತಯಾರಿಸಬೇಕು.

**6. ಅಂದಾಜು ಮಾಡುವುದು**

i. 100 ಮೀಟರ್‌ಗಳಿಗೆ ಮೀರದ, 30 ಮೀ. ಕಡಿಮೆ ಇಲ್ಲದ ಎರಡು ಎತ್ತರಗಳನ್ನು/ಅಗಲಗಳನ್ನು, ಸುಧಾರಿತ ಉಪಕರಣದ ಸಹಾಯದಿಂದ ಅಂದಾಜು ಮಾಡಬೇಕು.

ii. ನಿಮ್ಮ ಹೆಜ್ಜೆ / ಗತಿಯ ಬಗ್ಗೆ ತಿಳಿದಿದ್ದು, ಅದರ ಸಹಾಯದಿಂದ ಕ್ರಮಿಸಿದ ದೂರವನ್ನು ಅಂದಾಜು ಮಾಡಬೇಕು.

**7. ಹೊರಾಂಗಣ**

ಅ. ದಳದ ವಿಸ್ತೃತ ಆಟದಲ್ಲಿ ಭಾಗವಹಿಸಬೇಕು.

ಆ. ದಳದ ಶಿಬಿರಾಗ್ನಿಯಲ್ಲಿ ಭಾಗವಹಿಸಿರಬೇಕು. ಮತ್ತು ಎರಡು ಜಾನಪದ ಹಾಡುಗಳು/ ದೇಶಭಕ್ತಿ ಗೀತೆಗಳು ತಿಳಿದಿರಬೇಕು ಮತ್ತು ಪಟಾಲಂನ ಕಿರುನಾಟಕದಲ್ಲಿ ಭಾಗವಹಿಸಬೇಕು.

ಇ. ವಾಹನಗಳ ರಸ್ತೆಯ ಸುರಕ್ಷತಾ ನಿಯಮಗಳನ್ನು ತಿಳಿದಿರಬೇಕು. ಮತ್ತು ಅನುಸರಿಸಬೇಕು.

ಈ. ಸೈಕಲ್ ಸವಾರಿ ತಿಳಿದಿರಬೇಕು.

ಉ. ಶಾಲೆ / ಕಾಲೇಜು / ವಸತಿಯ ನೆರೆಹೊರೆಯಲ್ಲಿರುವ ಒಂದು ಕಾರ್ಖಾನೆಗೆ ಭೇಟಿ ನೀಡಬೇಕು. ಅದರಲ್ಲಿ ಉತ್ಪಾದಿಸುವ ವಿವಿಧ ವಸ್ತುಗಳ ಉತ್ಪಾದನಾ ಪ್ರಕ್ರಿಯೆ ಮತ್ತು ದುಡಿಮೆಯ ಮಹತ್ವವನ್ನು ಗೌರವಿಸುವುದನ್ನು ಅರ್ಥಮಾಡಿಕೊಳ್ಳಬೇಕು.

**8. ಸೇವೆ :**

ಈ ಕೆಳಗಿನವುಗಳನ್ನು ಯಾವುದಾದರೂ ಒಂದನ್ನು ಪೂರೈಸಬೇಕು.

ಅ. ಮುಖ್ಯೋಪಾಧ್ಯಾಯರೊಡನೆ ಚರ್ಚಿಸಿ, ನಿಮ್ಮ ಶಾಲೆಯಲ್ಲಿ ಒಂದು ಅಭಿವೃದ್ಧಿ ಯೋಜನೆಯನ್ನು ಕೈಗೊಳ್ಳಬೇಕು.

ಆ. ಕನಿಷ್ಠ ಒಂದು ತಿಂಗಳ ಅವಧಿಯ ಸಮಾಜ ಸೇವಾ ಶಿಬಿರ / ಶಿಬಿರಗಳಲ್ಲಿ ಭಾಗವಹಿಸಿರಬೇಕು.

ಇ. ಒಂದು ಸಮುದಾಯ ಜಾತ್ರೆ / ಮೇಳದ ಮೊದಲಿನ ಮತ್ತು ನಂತರದ ಕಾರ್ಯಗಳಿಗೆ ಸೇರಿದಂತೆ ಜಾತ್ರೆ / ಮೇಳದಲ್ಲಿ ಸೇವೆ ಸಲ್ಲಿಸಬೇಕು.

ಈ. ನಿಮ್ಮ ಪಟಾಲಂನೊಡನೆ, ಕಸ ವಿರೋಧಿ ಆಂದೋಲನದಲ್ಲಿ ಭಾಗವಹಿಸಿ ನಿಮ್ಮ ಶಾಲೆಯ ಅಥವಾ ಕೇಂದ್ರ ಕಛೇರಿಯ ಆವರಣವನ್ನು ಸ್ವಚ್ಛಗೊಳಿಸಲು ನೆರವಾಗಿ.

ಉ. ಸಂರಕ್ಷಣೆಯ 3–Rಗಳನ್ನು ಪ್ರದರ್ಶಿಸಬೇಕು. ಕಡಿಮೆಮಾಡು (Reduce), ಪುನರ್ವವೀಕರಣ (Recycle), ಪುನರುಪಯೋಗ (Reuse)

ಊ. ಸ್ವಸಹಾಯ ಗುಂಪುಗಳನ್ನು ರಚಿಸಿ ಅವುಗಳಲ್ಲಿ ಭಾಗವಹಿಸುವುದು.

ಎ. ಅದೇ ರೀತಿಯ, ಸ್ಕೌಟ್ ಕೌಶಲಗಳನ್ನು ಉಪಯೋಗಿಸಿದ ನಿರಂತರ ಚಟುವಟಿಕೆಗಳು.

**9. ಇಂದ್ರಿಯ ಶಿಕ್ಷಣ :**

ಈ ಕೆಳಗಿನ "ಕಿಂ" ಆಟಗಳನ್ನು ತಿಳಿದಿರಬೇಕು, ಆಡಬೇಕು. ಅವಲೋಕನೆ ಆಟಗಳು; ರುಚಿ ಆಟಗಳು; ಶಬ್ದ ಆಟಗಳು; ವಾಸನೆ ಆಟಗಳು; ಸ್ಪರ್ಶ ಆಟಗಳು.

**10. ಈ ಕೆಳಗಿನವುಗಳಲ್ಲಿ ಎರಡು ಪ್ರವೀಣ್ಯತಾ ಪದಕಗಳಿಗೆ ಅರ್ಹತೆ ಪಡೆಯಬೇಕು.**

1. ಬಾಣಸಿಗ, 2. ಚರ್ಮಪಟು, 3. ಪ್ರಾಣಿಮಿತ್ರ, 4. ತೋಟಗಾರ, 5. ಕರಕುಶಲಗಾರ, 6. ಸೈಕಲ್ ತಜ್ಞ, 7. ಮಡಿವಾಳ, 8. ಓದುಗ, 9. ಆಸ್ಪತ್ರೆ ಮೇಲ್ವಿಚಾರಕ

**11. ಶಿಸ್ತು :**

ಅ. ವಿವಿಧ ದಳ ರಚನೆಗಳನ್ನು ತಿಳಿದಿರಬೇಕು.

ಆ. ನಿಮ್ಮ ದಳದೊಡನೆ 3 ಸಮ ಸಾಲುಗಳ ಪಥಚಲನೆ ಮಾಡಬೇಕು. ಠೀಕು ಠಾಕಾಗಿ, ವ್ಯವಸ್ಥಿತವಾಗಿ ಶಿಸ್ತಿನಿಂದ ಚಲಿಸಬೇಕು. ಪಥಚಲನೆಯ ವೇಳೆ ಕವಾಯತು ಆದೇಶಗಳನ್ನು ಸರಿಯಾಗಿ ಪಾಲಿಸಬೇಕು.

ಇ. ನಿಮ್ಮ ದಳದ 4 ಸರ್ವಧರ್ಮ ಪ್ರಾರ್ಥನಾ ಸಭೆಗಳಲ್ಲಿ ಭಾಗವಹಿಸಬೇಕು.

**12. ಸಂಹವನ :**

ಅ. ಕಂಪ್ಯೂಟರ್ ಬಳಸಬೇಕು; ಮೊಬೈಲ್ ಫೋನ್, ಅಂತರ್ಜಾಲ ಇವುಗಳ ಅನುಕೂಲ, ಅನಾನುಕೂಲಗಳನ್ನು ತಿಳಿದಿರಬೇಕು; ಮತ್ತು ದೇಶದ ಪ್ರಗತಿಯಲ್ಲಿ ಅವುಗಳ ಬಳಕೆ ಬಗ್ಗೆ ತಿಳಿದಿಬೇಕು.

ಆ. ಅಂತರ್ಜಾಲವನ್ನು ಉಪಯೋಗಿಸುವುದನ್ನು ತಿಳಿದಿರಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಾಲತಾಣ ತೆರೆಯಲು ತಿಳಿದಿರಬೇಕು.

**13. ದೇಶ ಭಕ್ತಿ :**

ನಮ್ಮ ಸಂಸ್ಕೃತಿ ಮತ್ತು ಪರಂಪರೆಯ ಬಗ್ಗೆ ಮಾಹಿತಿ ಸಂಗ್ರಹಿಸಿ ದಾಖಲೆ ಪುಸ್ತಕವನ್ನು ತಯಾರಿಸಬೇಕು.

**ಸಾಗರ ಸ್ಕೌಟ್**

ಮೇಲಿನ ಪರೀಕ್ಷಾಂಶಗಳ ಜೊತೆಗೆ ಸಾಗರ ಸ್ಕೌಟ್‌ನು

1. ಈಜಲು ಕಲಿತಿರಬೇಕು
2. ಲಂಗರು (Anchor), ದೋಣಿ (Boat), ಹಾಯಿ (Sail) ಮತ್ತು ಹುಟ್ಟು (Oar) ಇವುಗಳ ಬಗ್ಗೆ ಸಾಮಾನ್ಯ ಅರಿವನ್ನು ಹೊಂದಿರಬೇಕು.
3. ದೋಣಿಯಲ್ಲಿ ಮಾಡಬಹುದಾದ ಮತ್ತು ಮಾಡಬಾರದ ಕಾರ್ಯಗಳ ಅರಿವನ್ನು ಹೊಂದಿರಬೇಕು.
4. ಕೃತಕ ಶ್ವಾಸಕ್ರಮ ನಡೆಸಲು ತಿಳಿದಿರಬೇಕು.

**ವಾಯು ಸ್ಕೌಟ್**

ಮೇಲಿನ ಪರೀಕ್ಷಾಂಶಗಳ ಜೊತೆಗೆ ವಾಯು ಸ್ಕೌಟ್‌ನು

1. ದೇಶದ ವಾಯುಪಡೆಯ ಇತಿಹಾಸ ತಿಳಿದಿರಬೇಕು.
2. ನಾಗರಿಕ ಮತ್ತು ಮಿಲಿಟರಿ ವಿಮಾನಗಳ ಮೇಲಿನ ಗುರುತುಗಳ ಬಗ್ಗೆ ಮಾಹಿತಿ ಹೊಂದಿರಬೇಕು.
3. ವಿಮಾನದ ಮತ್ತು ಅದರ ಮುಖ್ಯ ಭಾಗಗಳ ಬಗ್ಗೆ ಸಾಮಾನ್ಯ ಮಾಹಿತಿ ಹೊಂದಿರಬೇಕು.
4. ವಿಮಾನ ಮೈದಾನ ಅಥವಾ ವಿಮಾನ ನಿಲ್ದಾಣಗಳ ಬಗ್ಗೆ ಸಾಮಾನ್ಯ ಮಾಹಿತಿ ಹೊಂದಿರಬೇಕು.
5. ಹಾರಾಟದ ಕ್ರಮಗಳ ಮಾಹಿತಿ ಹೊಂದಿರಬೇಕು. (ಹಾರುವುದು, ಇಳಿಸುವುದು, ನಿರ್ದಿಷ್ಟ ಸ್ಥಳದಲ್ಲಿ ನಿಲ್ಲುವುದು ಇತ್ಯಾದಿ).

**ಸೂಚನೆ :** i. ತರಬೇತಿ ಸಲಹೆಗಾರರಿಂದ ಏರ್ಪಡಿಸಲ್ಪಟ್ಟ ಮತ್ತು ಸ್ಥಳೀಯ/ಜಿಲ್ಲಾ ಸಂಸ್ಥೆಯವರಿಂದ, ನೇಮಕ ಮಾಡಲ್ಪಟ್ಟ ಸ್ವತಂತ್ರ ಪರೀಕ್ಷಕರಿಗೆ ತೃಪ್ತಿಯಾಗುವಂತೆ, ದ್ವಿತೀಯ ಸೋಪಾನ್ ಪದಕದ ಪರೀಕ್ಷಾಂಶಗಳನ್ನು ಪೂರೈಸಿದ ನಂತರ, ಆ ಪರೀಕ್ಷಕರು ನೀಡಿದ ಪ್ರಮಾಣ ಪತ್ರವನ್ನು ಆಧರಿಸಿ ಸ್ಕೌಟ್‌ಗೆ ದ್ವಿತೀಯ ಸೋಪಾನ್ ಪದಕ ಕೊಡಲಾಗುತ್ತದೆ.

ii. 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಲಾಂಛನದ ಕೆಳಗೆ ಅಲಂಕಾರಿಕ

ಪಟ್ಟಿಯಲ್ಲಿ ದೇವನಾಗರಿ ಲಿಪಿಯಲ್ಲಿ 'ತಯ್ಯಾರ್' ಅಕ್ಷರಗಳನ್ನು ದ್ವಿತೀಯ ಸೋಪಾನ್ ಪದಕವು ಒಳಗೊಂಡಿರುತ್ತದೆ.

iii. ಎಡತೋಳಿನ ಮೇಲೆ ಪ್ರಥಮ ಸೋಪಾನ್ ಪದಕದ ಸ್ಥಾನದಲ್ಲಿ, ದ್ವಿತೀಯ ಸೋಪಾನ್ ಪದಕವನ್ನು ಧರಿಸಬೇಕು.

## 12. ತೃತೀಯ ಸೋಪಾನ್ ಪರೀಕ್ಷೆಗಳು



### 1. ಅಗ್ರಗಾಮಿತ್ವ

ಅ. ಇವುಗಳನ್ನು ಹಾಕಬೇಕು ಮತ್ತು ಉಪಯೋಗದ ತಿಳಿದಿರಬೇಕು. ಅಗ್ನಿಶಾಮಕ ಕುರ್ಚಿಗಂಟು (ಫೈರ್‌ಮನ್. ಛೇರ್ ನಾಟ್), ಏಣಿ ಗಂಟು, (ಮ್ಯಾನ್ ಹಾರ್ನೆಸ್), ಕುಣಿಕೆ ಹೆಣಿಗೆ (ಐಸ್ಪ್ಲೈಸ್), ಕುಣಿಕೆಯಲ್ಲಿ ಕುಣಿಕೆ (ಬೌಲಿನ್ ಆನ್‌ಬೈಟ್), ಜಾರುಮಲಕು (ಡ್ರಾಹಿಚ್).

ಆ. ಕರ್ಣಕಟ್ಟು ಹಾಕಬೇಕು. ಉಪಯೋಗ ಪ್ರದರ್ಶಿಸಬೇಕು.

ಇ. ಪ್ರಥಮ ಸೋಪಾನ್ ನಲ್ಲಿ ಕಲಿತ ವಿಧಾನ ವಲ್ಲದೆ ಬೇರೆ ವಿಧಾನದಲ್ಲಿ ಹುರಿ ಸುತ್ತುವುದು.

ಈ. ಕನಿಷ್ಠ 3 ದಂಡಗಳನ್ನು ಉಪಯೋಗಿಸಿ, ನಿಮ್ಮ ಪಟಾಲಂನವ-ರೊಂದಿಗೆ ಧ್ವಜಸ್ತಂಭ ನಿರ್ಮಿಸಬೇಕು. ಧ್ವಜಾರೋಹಣವನ್ನು ಮಾಡಿ ತೋರಿಸಬೇಕು.

ಉ. ನಿಮಗಾಗಿ ಒಂದು ತಾತ್ಕಾಲಿಕ ಆಶ್ರಯ ಕಟ್ಟಬೇಕು.

ಊ. ಕುಣಿಕೆ ಹೆಣಿಗೆ (Eye Splice) ಹಿಮ್ಮುಖ ಹೆಣಿಗೆ (Back Splice), ಜೋಡು ಹೆಣಿಗೆ, (Short Splice) ಇವುಗಳಲ್ಲಿ ಒಂದು ತಿಳಿದಿರಬೇಕು.

### 2. (i) ಈಜುವಿಕೆ

ಅ. 50 ಮೀ. ದೂರ ಈಜಬೇಕು.

ಆ. ಈಜುವಿಕೆಯ ಸುರಕ್ಷತಾ ನಿಯಮಗಳನ್ನು ತಿಳಿದಿರಬೇಕು.

ಇ. ಸ್ನಾಯು ಸೆಳೆತವನ್ನು ನಿರ್ವಹಿಸುವ ವಿಧಾನಗಳನ್ನು ತಿಳಿದಿರಬೇಕು.

ಅಥವಾ

**(ii)** ಈ ಕೆಳಗಿನವುಗಳಲ್ಲಿ ಒಂದು ಪ್ರವೀಣತಾ ಪದಕವನ್ನು ಗಳಿಸಬೇಕು. 1. ಕ್ರೀಡಾಪಟು, 2. ಒಂಟೆ ಸವಾರ, 3. ಆರೋಹಿ, 4. ಅಂಗ ಸಾಧಕ, 5. ಚಾರಣಿಗ, 6 ಕ್ರೀಡಾನಾಯಕ, 7. ಯೋಗ, 8. ಸೈಕಲ್ ತಜ್ಞ

**3. ಅಂದಾಜು ಮಾಡುವುದು**

ಅಂಗೀಕೃತ ವಿಧಾನಗಳನ್ನನುಸರಿಸಿ ಎತ್ತರ, ಆಳ, ಅಗಲ, ಸಂಖ್ಯೆ ಮತ್ತು ತೂಕಗಳನ್ನು ಅಂದಾಜು ಮಾಡಲು ಬರಬೇಕು.

**4. ಪ್ರಥಮ ಚಿಕಿತ್ಸೆ**

ಅ. ನೀರಿನಲ್ಲಿ ಮುಳುಗುವುದು; ವಿದ್ಯುದಾಘಾತ; ಸಾಮಾನ್ಯ ಆಘಾತ ವಾಹನ ಅಪಘಾತ; ಬೆಂಕಿಯಲ್ಲಿ ಸಿಕ್ಕಿಕೊಂಡ ವ್ಯಕ್ತಿ ಇಂತಹ ತುರ್ತು ಸನ್ನಿವೇಶ ನಿರ್ವಹಣೆ ತಿಳಿದಿರಬೇಕು.

ಆ. ಉಸಿರುಕಟ್ಟುವಿಕೆಗೆ ಚಿಕಿತ್ಸೆ ಮಾಡಬೇಕು.

ಇ. ಕೊರಳಿನ ಅಡ್ಡೆಲುಬು, ಮೇಲ್ತೋಳು, ಮುಂದೋಳು, ಪೃಷ್ಠ ಮತ್ತು ಕೆಳಕಾಲು ಮೂಳೆ ಇವುಗಳ ಸರಳ ಅಸ್ಥಿಭಂಗದಲ್ಲಿ ಅನುಸರಿಸಬೇಕಾದ ಕ್ರಮ ತಿಳಿದಿರಬೇಕು.

ಈ. ಶಾಖ ಆಘಾತ (Heat Stroke) ಮತ್ತು ಬಿಸಿಲಿನ ಆಘಾತ (Sun Stroke) ಇವುಗಳಿಗೆ ಚಿಕಿತ್ಸೆ ಮಾಡಬೇಕು.

ಉ. CPR ಪುನಶ್ಶ್ವಾಸಕ್ರಮವನ್ನು ಪ್ರದರ್ಶಿಸಬೇಕು. (ಹೃದಯಶ್ವಾಸಕೋಶ ಪುನಶ್ಚೇತನ)

ಊ. ಜ್ಞಾನ ತಪ್ಪಿದ ವ್ಯಕ್ತಿಯನ್ನು ಪುನಶ್ಚೇತನ ಭಂಗಿಯಲ್ಲಿ ವಾಲಿಸಬೇಕು.

ಋ. ಒಬ್ಬ ರಕ್ಷಕ / ಇಬ್ಬರು ರಕ್ಷಕರು ಇರುವಾಗ ಒಬ್ಬ ರೋಗಿಯನ್ನು ಕರೆದೊಯ್ಯುವುದು.

**5. ನಕಾಶೆ**

GPS ನಕ್ಷೆಯನ್ನು ಪಡೆದು, ಅದರ ಸಹಾಯದಿಂದ ಒಂದು ಪಥವನ್ನು ಅನುಸರಿಸಲು ತಿಳಿದಿರಬೇಕು.

ಅಥವಾ

ದಿಕ್ಸೂಚಿ ಉಪಯೋಗಿಸಿ, ತ್ರಿಕೋನ (Trangulation) ವಿಧಾನದಿಂದ ಅಥವಾ ಸಮತಲ ಮೇಜು (Plane Table) ವಿಧಾನದಿಂದ ಒಂದು ಪ್ರದೇಶದ ನಕ್ಷೆ ತಯಾರಿಸಿ

ಅಥವಾ

ರಸ್ತೆ ಪ್ರಯಾಣ ವಿಧಾನ / ಗಿಲ್‌ರ ವೆಲ್ ನಕ್ಷೆ ಬಳಸಿ, ಕನಿಷ್ಠ 4 ಕಿ.ಮೀ. ಗಳ ಪಥದ ನಕ್ಷೆ ತಯಾರಿಸಿ

**6. ಭಾಷಣ**

ದಳದ ಸಭೆಯಲ್ಲಿ ಈ ಕೆಳಕಾಣಿಸಿರುವ ವಿಷಯಗಳಲ್ಲಿ ಯಾವುದಾದರೂ ಒಂದರ ಬಗ್ಗೆ 5 ನಿಮಿಷಗಳ ಕಾಲ ಭಾಷಣ ಮಾಡಬೇಕು.

ಅ. ರಾಷ್ಟ್ರೀಯ ಭಾವೈಕ್ಯತೆ

ಆ. ವಿಶ್ವ ದೌರ್ಜನ್ಯ

ಇ. ಮಾದಕ ವಸ್ತು

ಈ. ನಿಮ್ಮ ಭವಿಷ್ಯದ ಸ್ಕೌಟ್ ತರಬೇತಿ

ಉ. ಲಿಂಗ ಸಮಾನತೆ

ಊ. ಮಕ್ಕಳ ಶಿಕ್ಷಣ, ಮಕ್ಕಳ ಆರೋಗ್ಯ, ಮಕ್ಕಳ ಸಾಮಾಜಿಕ ಭದ್ರತೆ; ಮತ್ತು ಬಾಲಕಾರ್ಮಿಕರು

ಋ. ನಾನು ಮುಕ್ತವಾಗಿರುವಿಕೆ

**7. ಹೊರ ಸಂಚಾರ**

ಅ. ಒಂದು ರಾತ್ರಿಯ ಪಟಾಲಂ ಶಿಬಿರಕ್ಕೆ ಯೋಜನೆ ತಯಾರಿಸಬೇಕು.

ಆ. ತನ್ನ ಪಟಾಲಂ/ದಳದ ಹೊರಸಂಚಾರವನ್ನು ದಳದ ಸದಸ್ಯರೊಡನೆ 10 ಕಿ.ಮೀ. ದೂರ ಕಾಲ್ನಡಿಗೆಯಲ್ಲಿ ಕ್ರಮಿಸಬೇಕು ಊಟ ಮತ್ತು ಚಹಾ ತಯಾರಿಸಬೇಕು ಮತ್ತು ಅದರ ವರದಿಯನ್ನು ಹೊರಸಂಚಾರ ಮುಗಿದ 7 ದಿನಗಳೊಳಗೆ ಸ್ಕೌಟ್ ಮಾಸ್ಟರಿಗೆ ಸಲ್ಲಿಸಬೇಕು. ಸಂಚಾರದ ಹಾದಿಯನ್ನು ಪರೀಕ್ಷಕರು ಕೊಡುತ್ತಾರೆ.

ಇ. ರಾತ್ರಿಯ ವೇಳೆ ಆಡಿಸುವ ಆಟದಲ್ಲಿ ಭಾಗವಹಿಸಬೇಕು.

**8. ಅಡಿಗೆ ಮಾಡುವುದು**

ನಿಮ್ಮ ಪಟಾಲಂಗಾಗಿ ಅಡಿಗೆಯನ್ನು ಕಗ್ಗಾಡು ವಾಸದ ವಿಧಾನದಲ್ಲಿ (Backwoodsman) ತಯಾರಿಸಬೇಕು.

**9. ಸಂಕೇತ ನೀಡುವುದು**

ಮೋರ್ಸ್ ಸಂಕೇತ ಕ್ರಮವನ್ನು ಕಲಿತು ಕನಿಷ್ಠ 10 ಪದಗಳನ್ನು ಒಳಗೊಂಡ ಸರಳವಾದ ಸಂದೇಶವನ್ನು ಕಳುಹಿಸಬೇಕು ಮತ್ತು ಸ್ವೀಕರಿಸಬೇಕು.

**10. ಪ್ರವೀಣತಾ ಪದಕಗಳು**

ಈ ಕೆಳಗಿನ ಎರಡು ಗುಂಪುಗಳಲ್ಲಿ, ಪ್ರತಿ ಗುಂಪಿಗೆ ಒಂದರಂತೆ **ಪ್ರವೀಣತಾ ಪದಕಗಳಿಗೆ ಅರ್ಹತೆ** ಪಡೆಯಬೇಕು.

**ಗುಂಪು–ಅ**

1. ನಾಗರೀಕ ರಕ್ಷಣೆ, 2. ಸಮುದಾಯ ಕಾರ್ಯಕರ್ತ, 3. ಪರಿಸರ ತಜ್ಞ, 4. ದೋಣಿ ನಡೆಸುವವ, 5. ಅಗ್ರಗಾಮಿ, 6. ವಿಶ್ವಸಂರಕ್ಷಣೆ, 7. ಸುರಕ್ಷತಾ ಅರಿವು, 8. ಸ್ವರಕ್ಷಣೆ

## ಗುಂಪು-ಆ

1. ನಾಗರೀಕ, 2. ಪುಸ್ತಕ ರಟ್ಟು ಕಟ್ಟುವವ, 3. ಪ್ರಕೃತಿ ತಜ್ಞ, 4. ಮಾರ್ಗಶೋಧಕ, 5. ಏಯ್ಡ್ಸ್ ಜಾಗೃತಿ, 6. ಆರೋಗ್ಯವಂತ, 7. ಮಾದಕ ದ್ರವ್ಯ ಜಾಗೃತಿ, 8. ಅಂಬಿಗ, 9. ಗಣಕ ಯಂತ್ರ ಜಾಗೃತಿ

**11. ಪರಿಜ್ಞಾನ**

ಅ. **ಭಾರತದಲ್ಲಿ ಸ್ಕೌಟಿಂಗ್** ಮತ್ತು WOSM (ಸ್ಕೌಟ್ ಚಳವಳಿಯ ವಿಶ್ವ ಸಂಘಟನೆ)ಗಳ ಬಗ್ಗೆ ತಿಳಿದಿರಬೇಕು.

ಆ. ಎ.ಟಿ.ಎಂ. ಕಾರ್ಡು ಮತ್ತು ಮೊಬೈಲ್ ಫೋನ್ ಬಳಸುವಾಗ ಅನುಸರಿಸಬೇಕಾದ ಸುರಕ್ಷತಾ ಕ್ರಮಗಳ ಬಗ್ಗೆ ತಿಳಿದಿರಬೇಕು. ಅಥವಾ ಸರಳ ವಿದ್ಯುತ್ / ವಿದ್ಯುನ್ಮಾನ ಬಳಸಿ ಗೃಹೋಪಯೋಗಿ ಉಪಕರಣಗಳನ್ನು ತರಬೇತಿ ಹೊಂದಿದ ಹಿರಿಯರ ಮೇಲ್ವಿಚಾರಣೆಯಲ್ಲಿ ತಯಾರಿಸಬೇಕು.

**12. ಬೆಂಕಿ**

ಈ ಕೆಳಗಿನವುಗಳಲ್ಲಿ ಯಾವುದಾದರೂ ಮೂರನ್ನು ಪೂರೈಸಬೇಕು.

ಅ. ಬೆಂಕಿ ಸಂಬಂಧ ಸುರಕ್ಷತಾ ಕ್ರಮಗಳು.

ಆ. ಬಕೆಟ್-ಸರಣಿ ವಿಧಾನದಲ್ಲಿ ಬೆಂಕಿಯನ್ನು ನಂದಿಸುವ ಕ್ರಮವನ್ನು ಪ್ರದರ್ಶಿಸಬೇಕು.

ಇ. ಒಣ ಹುಲ್ಲು ಬೆಂಕಿಯನ್ನು ನಿಭಾಯಿಸುವುದು.

ಈ. ಅಗ್ನಿಶಾಮಕಗಳು ಮತ್ತು ಅವುಗಳ ಉಪಯೋಗ.

**13. ಸೇವೆ**

ಕ್ಷಯ ರೋಗದ ಲಕ್ಷಣಗಳು ಮತ್ತು ಚಿಕಿತ್ಸೆ ಬಗ್ಗೆ ತಿಳಿದಿರಬೇಕು. ತಡೆಗಟ್ಟುವ ಮುನ್ನೆಚ್ಚರಿಕೆ ಕ್ರಮಗಳ ಅರಿವಿರಬೇಕು. ಮತ್ತು ನೇರ ಗಮನಿಸಿದ ಚಿಕಿತ್ಸೆ (DOTS) ವಿಧಾನದ ಬಗ್ಗೆ ತಿಳಿದಿರಬೇಕು.

**ಸಾಗರ ಸ್ಕೌಟ್**

ಮೇಲೆ ತಿಳಿಸಿದ ತೃತೀಯ ಸೋಪಾನ್ ಪರೀಕ್ಷೆಗಳಲ್ಲದೆ ಸಾಗರ ಸ್ಕೌಟ್‌ನು

1. 30 ಮೀಟರ್ ದೂರ ಈಜಬೇಕು.
2. ತಲೆ ಮೊದಲಾಗಿ ನೀರಿಗೆ ಜಿಗಿಯಲು (Dive) ಕಲಿಯಬೇಕು.
3. ವಿವಿಧ ರೀತಿಯ ದೋಣಿಗಳು, ಹುಟ್ಟುಗಳು, ಹಾಯಿಗಳು ಮತ್ತು ಲಂಗರುಗಳ ಬಗ್ಗೆ ತಿಳಿದಿರಬೇಕು.

4. ಸೆಮಾಫೋರ್ ವಿಧಾನದಲ್ಲಿ ಸಂಕೇತ ಕಳುಹಿಸಲು ತಿಳಿದಿರಬೇಕು.

5. ದಿಕ್ಕುಗಳನ್ನು ತಿಳಿಯಲು ಯಾವುದಾದರೂ ಮೂರು ನಕ್ಷತ್ರ ರಾಶಿಗಳನ್ನು ತಿಳಿದಿರಬೇಕು.

**ವಾಯು ಸ್ಕೌಟ್**

ತೃತಿಯ ಸೋಪಾನದ ಪರೀಕ್ಷೆಗಳ ಜೊತೆಗೆ ವಾಯುಸ್ಕೌಟ್‌ನು

1. ಹಾರಾಟದ ಇತಿಹಾಸ ತಿಳಿದಿರಬೇಕು.
2. ಹಾರಾಟದ ಸಿದ್ಧಾಂತ ತಿಳಿದಿರಬೇಕು.
3. ಹಾರಾಟದ ಸುರಕ್ಷತಾ ಕ್ರಮಗಳ ಬಗ್ಗೆ ತಿಳಿದಿರಬೇಕು.
4. ನಾಗರಿಕ ವಿಮಾನ ಯಾನ, ರಾಷ್ಟ್ರೀಯ, ಅಂತಾರಾಷ್ಟ್ರೀಯ ವಿಮಾನ ಮಾರ್ಗಗಳು ಬಗ್ಗೆ ತಿಳಿದಿರಬೇಕು.

**ಸೂಚನೆ :** i. ತರಬೇತಿ ಸಲಹೆಗಾರರಿಂದ ಏರ್ಪಡಿಸಲ್ಪಟ್ಟ ಮತ್ತು ಸ್ಥಳೀಯ / ಜಿಲ್ಲಾ ಸಂಸ್ಥೆಯವರಿಂದ ನೇಮಕ ಮಾಡಲ್ಪಟ್ಟ, ಸ್ವತಂತ್ರ ಪರೀಕ್ಷಕರಿಗೆ ತೃಪ್ತಿಯಾಗುವಂತೆ ತೃತೀಯ ಸೋಪಾನ್ ಪದಕದ ಪರೀಕ್ಷಾಂಶಗಳನ್ನು ಪೂರೈಸಿದ ನಂತರ ಆ ಪರೀಕ್ಷಕರು ನೀಡಿದ ಪ್ರಮಾಣ ಪತ್ರವನ್ನು ಆಧರಿಸಿ, ಸ್ಕೌಟ್‌ನಿಗೆ ತೃತೀಯ ಸೋಪಾನ್ ಪದಕ ಕೊಡಲಾಗುತ್ತದೆ.

ii. ತೃತೀಯ ಸೋಪಾನ್ ಪದಕವು, ದ್ವಿತೀಯ ಸೋಪಾನ್ ಪದಕದಂತೆ ಲಾಂಛನ ಮತ್ತು ಬರಹ ಒಳಗೊಂಡಿದ್ದು, ಅದನ್ನು ಎಲೆಗಳ ಮಾಲೆ ಸುತ್ತುವರಿದಿರುತ್ತದೆ.

iii. ಎಡ ತೋಳಿನ ಮೇಲೆ, ದ್ವಿತೀಯ ಸೋಪಾನ್ ಪದಕದ ಸ್ಥಾನದಲ್ಲಿ ತೃತೀಯ ಸೋಪಾನ್ ಪದಕವನ್ನು ಧರಿಸಬೇಕು.

## 13. ರಾಜ್ಯ ಪುರಸ್ಕಾರ್

**ರಾಜ್ಯ ಪುರಸ್ಕಾರ್ ಪದಕ ಪರೀಕ್ಷಾಂಶಗಳು**




1. ತೃತೀಯ ಸೋಪಾನ್ ಪದಕದವರೆಗಿನ ಜ್ಞಾನ ಮತ್ತು ಕೌಶಲ ಪ್ರವೀಣತೆಯ ಬಗ್ಗೆ ಖಚಿತಪಡಿಸಿಕೊಳ್ಳಬೇಕು.
2. ತೃತೀಯ ಸೋಪಾನ್ ಪದಕ ಪಡೆದಿರಬೇಕು.
3. ಚರಚಿಕಿತ್ಸಕ ಪ್ರವೀಣತಾ ಪದಕವನ್ನು ಪಡೆದಿರಬೇಕು.
4. ತನ್ನದೇ ದಳದ ಸದಸ್ಯರೊಡನೆ, 10 ಕಿ.ಮೀ. ದೂರದ, ಒಂದು

ರಾತ್ರಿಯ ಕಾಲ್ನಡಿಗೆ ಚಾರಣ ಕೈಗೊಂಡು, ಅಲ್ಲಿಂದ 10 ದಿನಗಳೊಳಗೆ ಸ್ಕೌಟ್ ಮಾಸ್ಟರಿಗೆ ವರದಿ ಸಲ್ಲಿಸಬೇಕು.

ಅಥವಾ

30 ಕಿ.ಮೀ. ದೂರದ ಒಂದು ರಾತ್ರಿಯ ಸೈಕಲ್ ಚಾರಣವನ್ನು ತನ್ನದೇ ದಳದ ಸ್ಕೌಟುಗಳೊಡನೆ ಕೈಗೊಂಡು ಅಲ್ಲಿಂದ 10 ದಿನಗಳೊಳಗೆ ಸ್ಕೌಟ್ ಮಾಸ್ಟರಿಗೆ ವರದಿ ಒಪ್ಪಿಸಬೇಕು.

5. ಈ ಕೆಳಗಿನವುಗಳಲ್ಲಿ ಯಾವುದಾದರೂ ಒಂದನ್ನು 6 ತಿಂಗಳ ಕಾಲ ಕಾರ್ಯಗತ ಮಾಡಿ, ವರದಿ ಒಪ್ಪಿಸುವುದು.

ಕೈತೋಟ, ಮಾಡದ ಮೇಲಿನ ತೋಟ, ತೂಗು ತೋಟ, ಪ್ರಕೃತಿ ಸಂಗ್ರಹ.

6. **ನಕ್ಷೆ**

ಮುಂಚೆ ಮಾಡದಿರುವ ವಿಧಾನದಲ್ಲಿ ನಕ್ಷೆ ತಯಾರಿಸುವುದು. ಸಮತಲ ವಿಧಾನ ಅಥವಾ ತ್ರಿಕೋನ ವಿಧಾನ ಅಥವಾ ರಸ್ತೆ ಪ್ರಯಾಣ ವಿಧಾನ

7. **ಶಿಬಿರಕೌಶಲ :** ಅ. ಒಂದು ಅಥವಾ ಎರಡು ಪದರ ಗುಡಾರವನ್ನು (Singal / Double) ಹಾಕಲು, ತೆಗೆಯಲು ಮತ್ತು ಪ್ಯಾಕ್ ಮಾಡಲು ಬರಬೇಕು.

**ಆ. ಹೆಣಿಗೆ**

ಕಣ್ಣಿ / ಹಿಮ್ಮುಖಿ / ಕೂಡು ಇವುಗಳಲ್ಲಿ ಹಿಂದೆ ಮಾಡದಿರುವ ಒಂದನ್ನು ಮಾಡಬೇಕು.

ಇ. ಪಟಾಲಂನ ಅಗ್ರಗಾಮಿ ಯೋಜನೆ ಒಂದನ್ನು ತಯಾರಿಸಬೇಕು.

8. ಈ ಕೆಳಗಿನವುಗಳಲ್ಲಿ ಯಾವುದಾದರೂ ಮೂರು, ಈ ಹಿಂದೆ ಪಡೆಯದಿರುವ ಪ್ರವೀಣತಾ ಪದಕಗಳನ್ನು ಗಳಿಸಬೇಕು. ಪಾಕೀಜು ಪ್ರವರ್ತಕ; ಸಾರ್ವಜನಿಕ ಆರೋಗ್ಯ ಕಾರ್ಯಕರ್ತ; ಮಣ್ಣು ಸಂರಕ್ಷಕ, ಸೌರಶಕ್ತಿ ಜಾಗೃತಿ, ಸುರಕ್ಷತಾ ಅರಿವು, ಗ್ರಾಮೀಣ ಅಭಿಯಂತರ, ಸಾಕ್ಷರತೆ, ಸಮುದಾಯ ಕಾರ್ಯಕರ್ತ, ಗ್ರಾಮೀಣ ಕಾರ್ಯಕರ್ತ.

9. ಈ ಕೆಳಗಿನವುಗಳಲ್ಲಿ ಯಾವುದಾದರೂ ಎರಡು ಈ ಮುಂಚೆ ಪಡೆಯದಿರುವ ಪ್ರವೀಣತಾ ಪದಕಗಳನ್ನು ಗಳಿಸಬೇಕು. ಶಿಬಿರವಾಸಿ; ಅಗ್ರಗಾಮಿ; ನಕ್ಷತ್ರ ವೀಕ್ಷಕ; ಅರಣ್ಯತಜ್ಞ; ಪ್ರಕೃತಿತಜ್ಞ; ಜಾದುಗಾರ; ವಿದ್ಯುತ್ ತಜ್ಞ; ಸಂಕೇತಗಾರ; ಅರ್ಬುಧರೋಗ ಜಾಗೃತಿ; ಆರೋಗ್ಯವಂತ; ಪೌಷ್ಟಿಕತೆ ಬೋಧಕ; ರೈತ; ಹೈನುಗಾರ; ಸಾಗರ ಮೀನುಗಾರ; ನಾನು ಮುಕ್ತವಾಗಿರುವಿಕೆ.

10. B.S.& G. ಜಾಲತಾಣದ ಬಗ್ಗೆ ತಿಳಿದಿದ್ದು ನಿಮ್ಮ ವಲಯದ ಬಗ್ಗೆ ಮಾಹಿತಿಯನ್ನು ಪಡೆಯಬೇಕು.

**ಸಾಗರ ಸ್ಕೌಟ್**

ಮೇಲೆ ತಿಳಿಸಿದ ರಾಜ್ಯ ಪುರಸ್ಕಾರ್ ಪರೀಕ್ಷಾಂಶಗಳಲ್ಲದೆ ಸಾಗರ ಸ್ಕೌಟ್‌ನು

i. ಬಿಮ್ಮುಖವಾಗಿ ಮತ್ತು ಇನ್ನೊಂದು ವಿಧಾನದಲ್ಲಿ 50 ಮೀ. ಈಜಬೇಕು.

ii. ತಲೆಮುಂದಾಗಿ ನೀರಿಗೆ ಜಿಗಿದು (Dive) ನೀರಿನ ತಳಮಟ್ಟದಲ್ಲಿ ಸ್ವಲ್ಪಕಾಲ ಉಳಿದಿರಬೇಕು (1 ನಿಮಿಷ).

iii. ಮುಳುಗುತ್ತಿರುವ ವ್ಯಕ್ತಿಯನ್ನು ರಕ್ಷಿಸಿ ಉಳಿಸುವ ವಿಧಾನಗಳನ್ನು ಕಲಿತಿರಬೇಕು.

iv. ಸೆಮಾಫೋರ್ ವಿಧಾನದಲ್ಲಿ ಸರಳ ಶಬ್ದಗಳನ್ನು ಕಳುಹಿಸಬೇಕು ಮತ್ತು ಸ್ವೀಕರಿಸಬೇಕು.

v. ನೆರೆ ರಾಷ್ಟ್ರಗಳ ರಾಷ್ಟ್ರಧ್ವಜಗಳ ಬಗ್ಗೆ ತಿಳಿದಿರಬೇಕು.

vi. ಕನಿಷ್ಠ ಮೂರು ನಾವಿಕ ನಕ್ಷತ್ರಗಳ ಬಗ್ಗೆ ತಿಳಿದಿರಬೇಕು.

**ವಾಯು ಸ್ಕೌಟ್**

ರಾಜ್ಯ ಪುರಸ್ಕಾರ್ ಪರೀಕ್ಷಾಂಶಗಳ ಜೊತೆಗೆ ವಾಯುಸ್ಕೌಟ್‌ನು

1. ಕನಿಷ್ಠ ಎರಡು ಬೇರೆ ಬೇರೆ ರೀತಿಯ ವಿಮಾನಗಳ ತೋರಿಕೆಯ ಮಾದರಿ (Dummy Aero Models)ಗಳನ್ನು ತಯಾರಿಸಬೇಕು.

2. ವಾಯು ನೆಲೆ. ಸಂಕೇತ ವಿಧಗಳ ಬಗ್ಗೆ ತಿಳಿದಿರಬೇಕು.

3. ಒಂದು ವಾಯು ನೆಲೆಯ ಮಾದರಿಯನ್ನು ಯೋಜಿಸಿ, ತಯಾರಿಸಬೇಕು.

4. ರಾಷ್ಟ್ರದ ಭೂಪಟದಲ್ಲಿ ವಾಯು ನೆಲೆಗಳು / ವಿಮಾನ ನಿಲ್ದಾಣಗಳನ್ನು ಗುರುತಿಸಬೇಕು.

**ಸೂಚನೆ :** i. ರಾಜ್ಯ ಪುರಸ್ಕಾರ್ ಪದಕದ ಕೆಳಭಾಗದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನವೂ, ಮೇಲ್ಭಾಗದಲ್ಲಿ ಅಶೋಕ ಚಕ್ರವೂ, ನಡುವೆ ದೇವನಾಗರಿ ಲಿಪಿಯಲ್ಲಿ ಬರೆದಿರುವ 'ಸೇವಾ' ಎಂಬ ಪದವೂ ಇರುತ್ತದೆ. ಇವಿಷ್ಟೂ ಲಾರೆಲ್ ಎಲೆಗಳ ಮಾಲೆಯಿಂದ ಸುತ್ತುವರೆಯಲ್ಪಟ್ಟಿರುತ್ತದೆ. ರಾಜ್ಯ ಪುರಸ್ಕಾರ ಪದಕವನ್ನು

ತೃತೀಯ ಸೋಪಾನ್ ಪದಕದ ಸ್ಥಾನದಲ್ಲಿ ಧರಿಸತಕ್ಕದ್ದು.

ii. ತರಬೇತಿ ಸಲಹೆಗಾರರು ಏರ್ಪಡಿಸಿದ ಮತ್ತು ಸ್ಥಳೀಯ/ಜಿಲ್ಲಾ ಪದಕ ಸಮಿತಿಯವರು ನೇಮಿಸಿದ ಸ್ವತಂತ್ರ ಪರೀಕ್ಷಕರು ನೀಡಿದ ಪ್ರಮಾಣ ಪತ್ರಗಳ ಆಧಾರದ ಮತ್ತು ರಾಜ್ಯಮಟ್ಟದ ಪರೀಕ್ಷಾ ಶಿಬಿರದ ಯಶಸ್ವಿ ಪೂರೈಕೆ ನಂತರ ಪದಕ ನೀಡಲಾಗುತ್ತದೆ.

iii. ಅರ್ಹತಾ ಪದಕಗಳನ್ನು ಗಳಿಸಿರುವ ಸ್ಕೌಟ್‌ಗಳು, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್) ಇವರ ನೇತೃತ್ವದಲ್ಲಿ ರಾಜ್ಯ ಸಂಸ್ಥೆಯವರು ಏರ್ಪಡಿಸುವ ರಾಜ್ಯ ಪುರಸ್ಕಾರ್ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಬೇಕು. ಆ ಶಿಬಿರಗಳಲ್ಲಿ ಸ್ಕೌಟ್‌ನ ತಿಳುವಳಿಕೆ ಮತ್ತು ಕೌಶಲಗಳ ಬಗ್ಗೆ ಮರು ಪರೀಕ್ಷೆ ನಡೆಸ-ಲಾಗುವುದು. ರಾಜ್ಯ ಮಟ್ಟದ ಈ ಶಿಬಿರದಲ್ಲಿ ಯಶಸ್ವಿಯಾಗಿ ಅರ್ಹತೆ ಪಡೆದ ನಂತರ ಸ್ಕೌಟ್‌ನು ರಾಜ್ಯ ಪುರಸ್ಕಾರ್ ಪದಕ ಮತ್ತು ಪ್ರಮಾಣ ಪತ್ರ ಪಡೆಯಲು ಅರ್ಹನಾಗುತ್ತಾನೆ.

iv. ರಾಜ್ಯ ಪುರಸ್ಕಾರ್ ಪದಕ ನೀಡುವ ಅಂತಿಮ ಅಧಿಕಾರವು ರಾಜ್ಯ ಮುಖ್ಯ ಆಯುಕ್ತರಿಗಿದ್ದು, ಪದಕ, ಪರೀಕ್ಷೆಗಳು ಇತ್ಯಾದಿಗಳ ಬಗ್ಗೆ ಕಾಲಕಾಲಕ್ಕೆ ಸೂಕ್ತ ನಿರ್ದೇಶನ ನೀಡುವರು. ಸ್ಕೌಟುಗಳ ಪರಿಜ್ಞಾನ ಮತ್ತು ಪ್ರವೀಣತಾ ಪದಕಗಳ ಜ್ಞಾನ ಮತ್ತು ಕೌಶಲಗಳ ಬಗ್ಗೆ ಖಚಿತ ಪಡಿಸಿಕೊಳ್ಳುವರು.

v. ರಾಜ್ಯ ಮುಖ್ಯ ಆಯುಕ್ತರ ಶಿಫಾರಸ್ಸಿನ ಮೇಲೆ, ರಾಜ್ಯಪಾಲರು ಅಥವಾ ರಾಜ್ಯ ಸಂಸ್ಥೆಯ ಪೋಷಕರು / ಅಧ್ಯಕ್ಷರು ಈ ಪದಕ -ವನ್ನು ಪ್ರದಾನ ಮಾಡುತ್ತಾರೆ ಮತ್ತು ನಿರ್ಬಂಧಿತ ಸಂದರ್ಭಗಳಲ್ಲಿ ರಾಜ್ಯ ಮುಖ್ಯ ಆಯುಕ್ತರು ಇದನ್ನು ಹಿಂಪಡೆಯಬಹುದು.

vi. ರಾಜ್ಯ ಪುರಸ್ಕಾರ್ ಪದಕವನ್ನು ಎಡತೋಳಿನ ಮೇಲೆ ತೃತೀಯ ಸೋಪಾನ್ ಸ್ಥಾನದಲ್ಲಿ ಧರಿಸಬೇಕು.

## 14. ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿ

ಅ. i. ಕನಿಷ್ಠ 12 ತಿಂಗಳು ಕಾಲ ರಾಜ್ಯ ಪುರಸ್ಕಾರ ಸ್ಕೌಟ್ ಆಗಿ ಸೇವೆ ಸಲ್ಲಿಸಿದ ನಂತರ ರಾಷ್ಟ್ರಪತಿ ಸ್ಕೌಟ್ ಪದಕವನ್ನು ಗಳಿಸುವ ಸ್ಕೌಟ್‌ಗೆ ಭಾರತ ಒಕ್ಕೂಟದ ರಾಷ್ಟ್ರಪತಿಗಳು ಒಂದು ವಿಶೇಷ ಪ್ರಮಾಣ ಪತ್ರ ನೀಡಿಕೆ-ಯನ್ನು ಅಧಿಕೃತಗೊಳಿಸಲು ಕೃಪೆ ಮಾಡಿ ಒಪ್ಪಿರುತ್ತಾರೆ.



ii. ರಾಜ್ಯ ಪುರಸ್ಕಾರ್ ಸ್ಕೌಟ್‌ನು ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿ ಅವಶ್ಯಕತೆಗಳನ್ನು ಪೂರೈಸುತ್ತಿದ್ದಾನೆಂಬ ವಿಷಯ -ವನ್ನು, ಮುಂದುವರೆದ ತರಬೇತಿ ಪಡೆದಿರುವ ಸ್ಕೌಟ್ ಮಾಸ್ಟರು, ರಾಜ್ಯ ಸಂಸ್ಥೆಯಲ್ಲಿ, ಜಿ.ಎಸ್.ಜಿ. ಜಾಲತಾಣದಲ್ಲಿ ಲಭ್ಯವಿರುವ ನೋಂದಣಿ ಪತ್ರದಲ್ಲಿ ಸೂಕ್ತ ಅಧಿಕಾರಿಗಳ ಮೂಲಕ ರಾಷ್ಟ್ರ ಕಛೇರಿಗೆ ತಿಳಿಸಬೇಕು. ಸ್ಕೌಟ್‌ನು, ರಾಷ್ಟ್ರಪತಿ ಪ್ರಶಸ್ತಿ ಪಡೆಯಲು ತನ್ನ ಸಾಧನೆಗಳನ್ನು ಆ ನೋಂದಣಿ ಪತ್ರದಲ್ಲಿ ನಮೂದಿಸಿ, ಪ್ರಾದೇಶಿಕ ಕೇಂದ್ರ ಕಛೇರಿಗೆ ಸೂಕ್ತ ಮಾರ್ಗದಲ್ಲಿ ಸಲ್ಲಿಸಬೇಕು. ಸ್ಕೌಟ್ ಮಾಸ್ಟರ್‌ನ ಅನುಪಸ್ಥಿತಿಯಲ್ಲಿ, ಮುಂದುವರೆದ ತರಬೇತಿ ಪಡೆದ ಸ॥ ಸ್ಕೌಟ್ ಮಾಸ್ಟರು, ಶಿಫಾರಸ್ಸು ಮಾಡಬಹುದು.

iii. ಮುಖ್ಯ ರಾಷ್ಟ್ರೀಯ ಆಯುಕ್ತರ ಕೋರಿಕೆ ಮೇರೆಗೆ ಒಂದು ಔಪಚಾರಿಕ ಸಮಾರಂಭದಲ್ಲಿ ಭಾರತದ ರಾಷ್ಟ್ರಪತಿಗಳು "ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿ" ಪ್ರಮಾಣ ಪತ್ರಗಳನ್ನು ಪ್ರದಾನ ಮಾಡುವರು.

iv. ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿಯ ಅರ್ಹತೆಯ ಪ್ರವೀಣತಾ ಪದಕಗಳ ಜೊತೆಗೆ, ರಾಜ್ಯ ಪುರಸ್ಕಾರ್ ಪದಕದ ಮೇಲ್ಭಾಗದಲ್ಲಿ, ಭುಜಪಟ್ಟಿಗಳ ಕೆಳಭಾಗದಲ್ಲಿ ಎಡತೋಳಿನ ಮೇಲೆ ರಾಷ್ಟ್ರಪತಿ ಸ್ಕೌಟ್ ಪದಕವನ್ನು ಧರಿಸಬೇಕು.

v. ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿಯನ್ನು ಮಂಜೂರು ಮಾಡಲು ಅಂತಿಮ ಅಧಿಕಾರ ಹೊಂದಿರುವ ಮುಖ್ಯ ರಾಷ್ಟ್ರೀಯ ಆಯುಕ್ತರು, ಪದಕ, ಪರೀಕ್ಷೆಗಳು ಇತ್ಯಾದಿಗಳ ಬಗ್ಗೆ ಕಾಲಕಾಲಕ್ಕೆ ಸೂಕ್ತ ನಿರ್ದೇಶನಗಳನ್ನು ನೀಡುತ್ತಾರೆ. ಹಾಗೂ ಸಂಬಂಧಪಟ್ಟ ಕೌಶಲಗಳ ಗುಣಮಟ್ಟವನ್ನು ಖಚಿತಗೊಳಿಸುತ್ತಾರೆ.

vi. ಒಬ್ಬ ಸ್ಕೌಟ್ ಮಾಸ್ಟರು / ಸ॥ ಸ್ಕೌಟ್ ಮಾಸ್ಟರು ದಳದ ಒಟ್ಟು ಗಣತಿಯ (32 ಮೀರದ) ಶೇಖಡಾ 25ರಷ್ಟು ಸ್ಕೌಟುಗಳನ್ನು ಮಾತ್ರ, ಒಂದು ವರ್ಷದಲ್ಲಿ ರಾಷ್ಟ್ರಪತಿ ಪ್ರಶಸ್ತಿಗೆ ಶಿಫಾರಸ್ಸು ಮಾಡಬಹುದು. ಆದರೆ ವಿಶೇಷ ಸಂದರ್ಭಗಳಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಮತ್ತು ರಾಜ್ಯ ಮುಖ್ಯ ಆಯುಕ್ತರು ಗರಿಷ್ಠ ಶೇ.50ರಷ್ಟು ಸ್ಕೌಟುಗಳನ್ನು ಒಂದು ವರ್ಷದಲ್ಲಿ ಶಿಫಾರಸ್ಸು ಮಾಡಬಹುದು.

vii. ರಾಜ್ಯ ಪುರಸ್ಕಾರ್ ಸ್ಕೌಟ್, ಎಲ್ಲಾ ಅವಶ್ಯಕ ನಿಬಂಧನೆಗಳನ್ನು ಮುಗಿಸಿದ್ದು, ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿ ಪರೀಕ್ಷಾ ಶಿಬಿರಕ್ಕೆ

ಪೂರ್ವಭಾವಿಯಾಗಿ ರಾಜ್ಯ ಮಟ್ಟದ ಪರೀಕ್ಷೆಗೊಳಗಾಗಿ, ಸದರಿ ರಾಜ್ಯ ಸಂಘಟನಾಧಿಕಾರಿಗಳಿಂದ ಪ್ರಮಾಣ ಪತ್ರ ಪಡೆದಿದ್ದರೆ ಅಂತಹ ಸ್ಕೌಟು, ಸಂಬಂಧಪಟ್ಟ ಸಹಾಯಕ ನಿರ್ದೇಶಕರ ಮೇಲ್ವಿಚಾರಣೆಯಲ್ಲಿ, ರಾಷ್ಟ್ರ ಕಾರ್ಯಾಲಯದವರು ಏರ್ಪಡಿಸುವ ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಬಹುದು.

**ಆ. ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿ ಪರೀಕ್ಷಾಂಶಗಳು**

1. ರಾಜ್ಯ ಪುರಸ್ಕಾರ್ ಪದಕವನ್ನು ಪಡೆದಿರಬೇಕು. ಮತ್ತು ಗುಣಮಟ್ಟವನ್ನು ಕಾಪಾಡಿಕೊಳ್ಳಬೇಕು.

2. **ಶಿಬಿರ ವಾಸ**

ಅ. ತನ್ನ ದಳ/ಪಟಾಲಂ ಜೊತೆ ಹೊರಾಂಗಣದಲ್ಲಿ ಅನುಕ್ರಮವಾಗಿ ಮೂರು ರಾತ್ರಿಗಳ ಶಿಬಿರ ಹೂಡಬೇಕು. (ಮೇಳಗಳು, ಜಾಂಬೋರಿಗಳು ಮುಂತಾದ ಸಮಾವೇಶಗಳನ್ನು ಇದಕ್ಕೆ ಪರಿಗಣಿಸುವಂತಿಲ್ಲ)

ಆ. ಇಬ್ಬರು ಮಲಗಲು ಸಾಧ್ಯವಾಗುವಂತಹ ಸುಧಾರಿತ ವಸತಿ, ಗುಡಿಸಲು/ಅಟ್ಟಣಿಗೆಯನ್ನು ಲಭ್ಯವಿರುವ ನೈಸರ್ಗಿಕ ವಸ್ತುಗಳಿಂದ ರಚಿಸಬೇಕು.

3. ಅ. ವಿಪತ್ತು ನಿರ್ವಹಣಾ ಪದಕವನ್ನು ಪಡೆದಿರಬೇಕು.

ಆ. ಚರಚಿಕಿತ್ಸಕ ಪದಕವನ್ನು ಪುನರ್ತೇಗಡೆ ಹೊಂದಬೇಕು.

4. ಈ ಕೆಳಕಂಡ ಪ್ರವೀಣತಾ ಪದಕಗಳ ಪೈಕಿ ಈ ಹಿಂದೆ ಗಳಿಸದೇ ಇರುವ ಎರಡು ಪ್ರವೀಣತಾ ಪದಕಗಳನ್ನು ಗಳಿಸಬೇಕು.

1. ಏಯ್ಡ್ಸ್ ಜಾಗೃತಿ, 2. ಕರಕುಶಲಗಾರ, 3. ಅಗ್ನಿಶಾಮಕ, 4. ಮಾರ್ಗಶೋಧಕ, 5. ಸಾಗರ ಮೀನುಗಾರ, 6. ಚಾರಣಿಗ, 7. ವಿಶ್ವ ಸಂರಕ್ಷಣೆ, 8. ದುಭಾಷಿ, 9. ರೈತ, 10. ನಾನು ಮುಕ್ತವಾಗಿರುವಿಕೆ, 11. ಸೌರ ಶಕ್ತಿ ಜಾಗೃತಿ, 12. ಘಟನಾ ನಿರ್ವಾಹಕ, 13. ಸ್ವರಕ್ಷಣೆ, 14. ಕಗ್ಗಾಡುವಾಸಿ

5. ಈ ಕೆಳಕಂಡ ಯಾವುದಾದರೂ ಎರಡು ವಿಷಯಗಳ ಬಗ್ಗೆ, ವಾರಕ್ಕೆ ಕನಿಷ್ಠ 2 ಗಂಟೆಗಳ ಕಾಲ, ಆರು ತಿಂಗಳುಗಳ ವರೆಗೆ, ನಿರಂತರ ಸಮುದಾಯ ಅಭಿವೃದ್ಧಿ ಯೋಜನೆಯಲ್ಲಿ ಭಾಗವಹಿಸಬೇಕು.

ಅ. ಲಿಂಗ ಸಮಾನತೆ ಮತ್ತು ಮಹಿಳಾ ಸಬಲೀಕರಣದ ಉತ್ತೇಜನೆ.

ಆ. ಶಿಶು ಮರಣ ಕಡಿಮೆ ಮಾಡುವುದು.

ಇ. ಮಾತೃ ಆರೋಗ್ಯ ಸುಧಾರಣೆ.

ಈ. ಎಚ್.ಐ.ವಿ. / ಏಯ್ಡ್ಸ್, ಮಲೇರಿಯಾ ಮತ್ತಿತರ ರೋಗಗಳನ್ನು ಎದುರಿಸುವುದು.

ಉ. ಸಂರಕ್ಷಣೆಯನ್ನು ಖಚಿತ ಪಡಿಸಿಕೊಳ್ಳುವಿಕೆ.

6. ಸಮೀಪದ ಹಿಂಡು ಅಥವ ದಳದ ಪದಕ ಬೋಧಕನಾಗಿ ಕಾರ್ಯ ನಿರ್ವಹಿಸಬೇಕು. ಅಥವಾ ಚಿಕ್ಕ ಮಕ್ಕಳಿಗೆ 15 ದಿನಗಳವರೆಗೆ ಆಟಗಳನ್ನು ಕಲಿಸಬೇಕು.

7. ಸ್ವಿಟ್ಜರ್‌ಲ್ಯಾಂಡ್‌ನಲ್ಲಿರುವ, ವಿಶ್ವ ಸ್ಕೌಟ್ ಸಂಘಟನೆಯ, ಕ್ಯಾಂಡರ್ ಸ್ಟಾಗ್ ಸಾಹಸ ಕೇಂದ್ರದ ಬಗ್ಗೆ ಮಾಹಿತಿ ಸಂಗ್ರಹಿಸಿ ದಾಖಲಾತಿ ಪುಸ್ತಕ ಮಾಡುವುದು.

8. ವಿಶ್ವ ಸ್ಕೌಟ್ ಸಂಘಟನೆಯ ಜಾಲತಾಣದ ಬಗ್ಗೆ ತಿಳಿದಿದ್ದು, ಏಷಿಯಾ ಪೆಸಿಫಿಕ್ ಪ್ರದೇಶದ ಬಗ್ಗೆ ಮಾಹಿತಿ ಪಡೆಯಬೇಕು.

9. ರಾಜ್ಯ ಪುರಸ್ಕಾರ್ ಸ್ಕೌಟ್ ಆಗಿ ಕನಿಷ್ಠ 12 ತಿಂಗಳುಗಳ ಕಾಲ ಸೇವೆ ಸಲ್ಲಿಸಿರಬೇಕು.

**ಸೂಚನೆ :** 1) ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿಯನ್ನು ಭಾರತದ ರಾಷ್ಟ್ರಪತಿಗಳು ಪ್ರದಾನ ಮಾಡುವರು.

2) ಮುಖ್ಯ ರಾಷ್ಟ್ರೀಯ ಆಯುಕ್ತರ ಶಿಫಾರಸ್ಸಿನ ಮೇಲೆ ಭಾರತದ ರಾಷ್ಟ್ರಪತಿಗಳು ಈ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಾರೆ. ಮತ್ತು ಒತ್ತಡದ ಸಂದರ್ಭಗಳಲ್ಲಿ ಮುಖ್ಯ ರಾಷ್ಟ್ರೀಯ ಆಯುಕ್ತರು ಹಿಂಪಡೆಯಬಹುದು.

**ಸಾಗರ ಸ್ಕೌಟ್**

ಮೇಲೆ ತಿಳಿಸಿದ ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿಯ ಪರೀಕ್ಷಾಂಶಗಳ ಜೊತೆಗೆ ಸಾಗರ ಸ್ಕೌಟ್‌ನು.

1. ಹಿಮ್ಮುಖವಾಗಿ ನೂರು ಮೀಟರ್ ಈಜಬೇಕು.

2. ಯಾವುದೇ ಎರಡು ಬಗೆಗಳಲ್ಲಿ ತಲೆಮುಂದಾಗಿ ನೀರಿಗೆ ಜಿಗಿಯಬೇಕು.

3. ನಮ್ಮ ನೌಕಾಪಡೆ ಹಾಗೂ ನೌಕಾಪಡೆಯ ಶ್ರೇಣಿಗಳ ಬಗ್ಗೆ ಸಾಮಾನ್ಯ ತಿಳಿವಳಿಕೆ ಹೊಂದಿರಬೇಕು.
4. ಮೋರ್ಸ್ ವಿಧಾನದ ಸಂಕೇತ ಕ್ರಮವನ್ನು ಕಲಿತಿರಬೇಕು.
5. ಹಡಗುಗಳ ಬಗ್ಗೆ ಸಾಮಾನ್ಯ ಜ್ಞಾನ ಹೊಂದಿರಬೇಕು.
6. ಹವಾಮಾನ, ಮಾರುತಗಳು ಮತ್ತು ಉಬ್ಬರವಿಳಿತಗಳ ಬಗ್ಗೆ ಸಾಮಾನ್ಯ ಮಾಹಿತಿ ಹೊಂದಿರಬೇಕು.
7. ರಾಶಿ ಚಕ್ರದ ಬಗ್ಗೆ ತಿಳಿದಿರಬೇಕು.

**ವಾಯು ಸ್ಕೌಟ್**

ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿಯ ಪರೀಕ್ಷಾಂಶಗಳ ಜೊತೆಗೆ ವಾಯುಸ್ಕೌಟ್‌ನು

1. ವಿಮಾನಗಳ ಕಾವಲು ಮತ್ತು ವ್ಯೂಹ ಕಟ್ಟುಗಳ ಬಗ್ಗೆ ತಿಳಿದಿರಬೇಕು.
2. ಕನಿಷ್ಠ ಮೂರು ವಾಯು ಮಾದರಿ ಅಭ್ಯಾಸಗಳಲ್ಲಿ ಭಾಗವಹಿಸಿ ಸ್ಕೌಟ್ ಮಾಸ್ಟರ್‌ಗೆ ವರದಿ ಸಲ್ಲಿಸಬೇಕು.
3. ಒಂದು ವಾಯು ಮಾದರಿಗೆ ಇಂಧನ ಮಿಶ್ರಣ ತಯಾರಿಸಿ. ಅದನ್ನು ಅಭ್ಯಾಸದಲ್ಲಿ ಬಳಸಬೇಕು.



## *15. ಸ್ಕೌಟ್ ಪ್ರವೀಣತಾ ಪದಕಗಳು

ಅ. ಸ್ಕೌಟ್ ಪ್ರವೀಣತಾ ಪದಕಗಳು ಈ ಕೆಳಕಂಡಂತಿವೆ :

| ಸಚ್ಚಾರಿತ್ರ್ಯ (ನಡತೆ) | ಆರೋಗ್ಯ | ಹವ್ಯಾಸ ಮತ್ತು ಕರಕುಶಲತೆ | ಸೇವೆ | ಸಂರಕ್ಷಣೆ ಮತ್ತು ತಾಂತ್ರಿಕಕತೆ |
|---|---|---|---|---|
| ಶಿಬಿರ ವಾಸಿ | ಬಿಲ್ಲುಗಾರ | ಕಲಾಗಾರ | ಏಯ್ಡ್ಸ್ ಜಾಗೃತಿ | ವಿಮಾನಚಾಲಕ |
| ನಾಗರಿಕ | ಕ್ರೀಡಾಪಟು | ವಿಮಾನ ಗುರುತಿಸುವವ | ಚರಚಿತ್ರಕ | ಗಣಕಯಂತ್ರ ಜಾಗೃತಿ |
| ಚರ್ಚಾಪಟು | ಆರೋಹಿ | ಕಗ್ಗಾಡು ಜೀವಿ | ಅಂಬಿಗ | ಪರಿಸರತಜ್ಞ |
| ಮನೋರಂಜಕ | ಸೈಕಲ್ ತಜ್ಞ | ಬುಟ್ಟಿ ತಯಾರಿಕೆ | ಅರ್ಬುಧರೋಗ ಜಾಗೃತಿ | ವಿದ್ಯುತ್ ತಜ್ಞ |
| ನಾನಾ ಮುಕ್ತವಾಗಿರುವಿಕೆ | ಕ್ರೀಡಾ ನಾಯಕ | ಜೇನುಪಾಲಕ | ನಾಗರಿಕ ರಕ್ಷಣೆ | ವಿದ್ಯುನ್ಮಾನ |
| ಉತ್ತಮ ನೆರೆಹೊರೆ | ಅಂಗ ಸಾಧಕ | ಪಕ್ಷಿಪಾಲಕ | ಸಮುದಾಯಕಾರ್ಯಕರ್ತ | ಅನ್ವೇಷಕ |
| ಪ್ರಕೃತಿ ತಜ್ಞ | ಆರೋಗ್ಯವಂತ | ಪುಸ್ತಕರಟ್ಟು ಕಟ್ಟುವವ | ವಿಪತ್ತು ನಿರ್ವಹಣೆ | ಪ್ರಾಣಿ ಮಿತ್ರ |
| ಓದುಗ | ಚಾರಣಿಗ | ಅಂಧ ಲಿಪಿ | ಮಾದಕವಸ್ತು ಜಾಗೃತಿ | ತೋಟಗಾರ |
| ಉತ್ತಮ ವಿದ್ಯಾರ್ಥಿ | ಮಾರ್ಗಶೋಧಕ | ಒಂಟೆ ಸವಾರ | ಘಟನಾ ನಿರ್ವಾಹಕ | ಮೂಲಿಕಾ ತಜ್ಞ |
| ವಿಶ್ವ ಮೈತ್ರಿ | ಅಗ್ರಗಾಮಿ | ಶಿಬಿರ ಪಾಲಕ | ರೈತ | ಪರಂಪರೆ |
| | ಸುರಕ್ಷತಾ ಅರಿವು | ಬಡಗಿ | ಅಗ್ನಿಶಾಮಕ | ಹವಾಮಾನ ತಜ್ಞ |
| | ಸ್ವರಕ್ಷಣೆ | ಸಮುದಾಯ ಗಾಯನ | ಆಸ್ಪತ್ರೆ ಮೇಲ್ವಿಚಾರಕ | ವಾಹನ ಕರ್ಮಿ |

| ಸಚ್ಚಾರಿತ್ರ್ಯ (ನಡತೆ) | ಆರೋಗ್ಯ | ಹವ್ಯಾಸ ಮತ್ತು ಕರಕುಶಲತೆ | ಸೇವೆ | ಸಂರಕ್ಷಣೆ ಮತ್ತು ತಾಂತ್ರಿಕಕತೆ |
|---|---|---|---|---|
| | ಈಜುಗಾರ | ಬಾಣಸಿಗ | ಕಿವುಡರ ದುಭಾಷಿ | ಕೊಳಾಯಿ ದುರಸ್ತಿಗಾರ |
| | ಜಾಡುಗಾರ | ಹೈನುಗಾರ | ಕುಷ್ಠರೋಗ ನಿಯಂತ್ರಣ | ಕೋಳಿ ಸಾಕುವವ |
| | ಯೋಗ | ಮರಳುಗಾಡು ವಾಸಿ | ಸಾಕ್ಷರತೆ | ಮಣ್ಣು ಸಂರಕ್ಷಕ |
| | | ಪುಷ್ಪ ತಜ್ಞ | ಪೌಷ್ಠಿಕತೆ ಬೋಧಕ | ಸೌರಶಕ್ತಿ ಜಾಗೃತಿ |
| | | ಜಾನಪದ ನರ್ತಕ | ಸಾರ್ವಜನಿಕ ಆರೋಗ್ಯ - ಕಾರ್ಯಕರ್ತ | ಮರಸು ಬೇಟೆಗಾರ |
| | | ಅರಣ್ಯ ತಜ್ಞ | ರಕ್ಷಕ | ವಿಶ್ವ ಸಂರಕ್ಷಣೆ |
| | | ಕರಕುಶಲಗಾರ | ಗ್ರಾಮೀಣ ಅಭಯಂತ | |
| | | ಪತ್ರಕರ್ತ | ಗ್ರಾಮೀಣ ಕಾರ್ಯಕರ್ತ | |
| | | ಮಡಿವಾಳ | ಪಾಕೀಜು ಪ್ರವರ್ತಕ | |
| | | ಚರ್ಮಕರ್ಮಿ | | |
| | | ನಕ್ಷೆ ತಯಾರಕ | | |
| | | ಗುರಿಕಾರ | | |
| | | ಸಂಗೀತಗಾರ | | |

| ಸಜ್ಜಾರಿತ್ರ್ಯ (ನಡತೆ) | ಆರೋಗ್ಯ | ಹವ್ಯಾಸ ಮತ್ತು ಕರಕುಶಲತೆ | ಸೇವೆ | ಸಂರಕ್ಷಣೆ ಮತ್ತು ತಾಂತ್ರಿಕಕತೆ |
|---|---|---|---|---|
| | | ದೋಣಿ ನಡೆಸುವವ | | |
| | | ಛಾಯಾ ಗ್ರಾಹಕ | | |
| | | ಮುದ್ರಣಕಾರ | | |
| | | ಮಾರಾಟಗಾರ | | |
| | | ಕಾರ್ಯದರ್ಶಿ | | |
| | | ಸಾಗರ ಮೀನುಗಾರ | | |
| | | ಸಂಕೇತಗಾರ | | |
| | | ನಕ್ಷತ್ರ ವೀಕ್ಷಕ | | |
| | | ದರ್ಜಿ | | |
| | | ತಂತಿಸಂದೇಶ ಕಳುಹಿಸುವವ | | |

ಅ. ಈ ಪದಕಗಳಿಗಾಗಿ ಪರೀಕ್ಷಾಂಶಗಳ ವಿವರವನ್ನು ಅನುಬಂಧ-1ರಲ್ಲಿ ನೀಡಲಾಗಿದೆ.

ಆ. ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯವರು ನೇಮಿಸಿದ ಅರ್ಹ ಮತ್ತು ಸ್ವತಂತ್ರ ಪರೀಕ್ಷಕರು ನೀಡಿದ ಪ್ರಮಾಣ ಪತ್ರಗಳ ಆಧಾರದ ಮೇಲೆ ಈ ಪ್ರವೀಣತಾ ಪದಕಗಳನ್ನು ನೀಡಲಾಗುತ್ತದೆ. ಪರೀಕ್ಷಕರಿಗೆ ಮನವರಿಕೆಯಾಗುವಂತೆ, ಯಶಸ್ವಿಯಾಗಿ ಪರೀಕ್ಷೆಗಳನ್ನು ಪೂರೈಸಿದ ಸ್ಕೌಟ್‌ಗೆ ಈ ಪ್ರಮಾಣ ಪತ್ರಗಳನ್ನು ನೀಡಲಾಗುವುದು.

ಇ. ಬೇರೆ ರೀತಿಯಲ್ಲಿ ಸೂಚಿಸಿದ ಹೊರತು ಎಲ್ಲಾ ಪ್ರವೀಣತಾ ಪದಕಗಳನ್ನು ಬಲ ತೋಳಿನ ಮೇಲೆ ಸಮಾನಾಂತರ ಸಾಲುಗಳಲ್ಲಿ ಧರಿಸಬೇಕು. ಚರ ಚಿಕಿತ್ಸಕ ಪದಕಗಳನ್ನು ಎರಡೂ ತೋಳುಗಳ ಮೇಲೆ ಭುಜ ಪದಕಗಳ ಕೆಳಗೆ ಧರಿಸಬೇಕು.

ಈ. ಈ ಪದಕಗಳನ್ನು ಸ್ಕೌಟ್‌ಗಳು ಮಾತ್ರ ಧರಿಸಬೇಕು.

ಉ. ಚರ ಚಿಕಿತ್ಸಕ ಪದಕವನ್ನು ಹೊರತು ಪಡಿಸಿ, ಸ್ಕೌಟ್ ವಿಭಾಗದ ಎಲ್ಲಾ ಪ್ರವೀಣತಾ ಪದಕಗಳು ಬೂದು ಬಣ್ಣದ ಹಿನ್ನೆಲೆಯಲ್ಲಿ ಹಸಿರು ಬಣ್ಣದಲ್ಲಿರುತ್ತದೆ.

**16. ಸ್ಕೌಟುಗಳ ಹೊರ ಸಂಚಾರ, ಚಾರಣ ಮತ್ತು ಶಿಬಿರ**

1. ಸ್ಕೌಟ್‌ಗಳಿಗೆ ನಿಯತ ಕಾಲಿಕ ಹೊರ ಸಂಚಾರ, ಚಾರಣ ಮತ್ತು ಶಿಬಿರಗಳನ್ನು ಪ್ರೋತ್ಸಾಹಿಸಬೇಕು ಮತ್ತು ಏರ್ಪಡಿಸಬೇಕು.
2. ಜಿಲ್ಲೆಯೊಳಗೆ ಹೊರ ಸಂಚಾರ ಅಥವಾ ಚಾರಣ ಹೋಗ ಬಯಸುವ ಸ್ಕೌಟ್‌ನು, ಸ್ಕೌಟ್ ಮಾಸ್ಟರ್ ಮೂಲಕ ಜಿಲ್ಲಾ ಆಯುಕ್ತರ ಅನುಮತಿ ಪಡೆಯಬೇಕು.
3. ಜಿಲ್ಲೆಯ ಹೊರಗೆ ಹೊರ ಸಂಚಾರ ಅಥವಾ ಚಾರಣ ಕೈಗೊಳ್ಳಲಿರುವ ಸ್ಕೌಟ್‌ನು ತನ್ನ ಪಾಲಕರ ಅನುಮತಿಯೊಂದಿಗೆ ಜಿಲ್ಲಾ ಸ್ಕೌಟ್ ಆಯುಕ್ತರ ಮೂಲಕ ರಾಜ್ಯ ಸ್ಕೌಟ್ ಆಯುಕ್ತರ ಅನುಮತಿ ಪಡೆಯಲೇಬೇಕು.
4. ಹೊರ ಸಂಚಾರ ಅಥವಾ ಚಾರಣವನ್ನು ಸಮರ್ಪಕವಾಗಿ ವ್ಯವಸ್ಥೆ ಮಾಡಲು ಸ್ಕೌಟ್ ಮಾಸ್ಟರರು ತಮ್ಮ ಸಹಿ ಇರುವ "ಅನುಮತಿ ಪತ್ರ" ನೀಡಬೇಕು. ದಳದ ನೇತೃತ್ವ ವಹಿಸಿರುವ ಸ್ಕೌಟ್ ಮಾಸ್ಟರಿಗೆ ಮಾತ್ರ ಜಿಲ್ಲಾ ಸಂಘಟನಾ ಆಯುಕ್ತರು "ಅನುಮತಿ ಪತ್ರ" ನೀಡುವರು ಮತ್ತು ತದನಂತರ ಸ್ಕೌಟ್ ಮಾಸ್ಟರರು ಪಟಾಲಂ ನಾಯಕನಿಗೆ 'ಅನುಮತಿ ಪತ್ರ'ವನ್ನು ನೀಡುವರು.

5. ತಂದೆ-ತಾಯಿಯರ/ಪೋಷಕರ, ಸ್ಕೌಟ್ ಮಾಸ್ಟರರ ಮತ್ತು ಸಂಬಂಧಪಟ್ಟ ಜಿಲ್ಲಾ ಸಂಘಟನಾ ಆಯುಕ್ತರ ಲಿಖಿತ ಅನುಮತಿಯಿಲ್ಲದೆ ಯಾವುದೇ ಸ್ಕೌಟ್‌ನು ಹೊರ ಸಂಚಾರ ಅಥವಾ ಚಾರಣ ಅಥವಾ ಶಿಬಿರ ಇವುಗಳಲ್ಲಿ ಭಾಗವಹಿಸುವಂತಿಲ್ಲ.

6. ಸಂಬಂಧಪಟ್ಟ ಜಿಲ್ಲಾ ಸಂಘಟನಾ ಆಯುಕ್ತರ ಲಿಖಿತ ಅನುಮತಿ ಪಡೆಯಲು ನಿಗದಿತ ಅರ್ಜಿಯಲ್ಲಿ ಸಾಕಷ್ಟು ಮುಂಚಿತವಾಗಿ ಅವಶ್ಯವಿರುವ ಸೂಚನೆ ವಿವರಗಳೊಂದಿಗೆ ಜಿಲ್ಲಾ ಸಂಘಟನಾ ಆಯುಕ್ತರಿಗೆ ಅರ್ಜಿ ಸಲ್ಲಿಸಬೇಕು.

7. ಆ ಉದ್ದೇಶಕ್ಕಾಗಿಯೇ ಅರ್ಹತೆ ಹೊಂದಿರುವ ಮತ್ತು ತರಬೇತಿ ಪಡೆದ ಪಟಾಲಂ ನಾಯಕ ಅಥವಾ ಸ್ಕೌಟ್ ಮಾಸ್ಟರರ ನಾಯಕತ್ವ ಇಲ್ಲದೇ, ಸ್ಕೌಟ್‌ನು ಶಿಬಿರದಲ್ಲಿ ಭಾಗವಹಿಸುವಂತಿಲ್ಲ.

8. ತಮ್ಮ ಸ್ವಂತ ಜಿಲ್ಲೆಯ ಹೊರಗಡೆ ಶಿಬಿರ ಹೂಡಬೇಕಾದ ಸಂದರ್ಭದಲ್ಲಿ ಜಿಲ್ಲಾ ಸಂಘಟನಾ ಆಯುಕ್ತರಿಗೆ 14 ದಿನಗಳ ಮೊದಲೇ ಸೂಚನೆ ನೀಡಬೇಕು. ಇದರಿಂದಾಗಿ ಶಿಬಿರ ನಡೆಯುವ ಜಿಲ್ಲೆಯ ಜಿಲ್ಲಾ ಸಂಘಟನಾ ಆಯುಕ್ತರಿಗೆ ಸಕಾಲದಲ್ಲಿ ತಿಳಿಸಲು ಅನುಕೂಲವಾಗುತ್ತದೆ.

9. ರಾಜ್ಯದ ಹೊರಗಡೆ ಶಿಬಿರ ಹೂಡುವ ಸ್ಕೌಟ್‌ಗಳು ರಾಜ್ಯ ಸಂಸ್ಥೆಯ ಅನುಮತಿ ಪಡೆಯಬೇಕು. ಇದಕ್ಕಾಗಿ ಸಲ್ಲಿಸುವ ಅರ್ಜಿಯನ್ನು ಸಂಬಂಧಿಸಿದ ಜಿಲ್ಲಾ ಸಂಘಟನಾ ಆಯುಕ್ತರು, ರಾಜ್ಯ ಸಹಾಯಕ ಆಯುಕ್ತರು ಅಥವಾ ಸ್ಥಳೀಯ / ಜಿಲ್ಲಾ ಸಂಸ್ಥೆಯವರು ಶಿಫಾರಸ್ಸು ಮಾಡಬೇಕು.

10. ಶಿಬಿರ ಹೂಡಲು ತೆರಳುವ ಸ್ಕೌಟ್‌ನು ಸಮವಸ್ತ್ರ, ಹಾಸಿಗೆ ಹೊದ್ದಿಕೆಗಳು ಸೇರಿದಂತೆ ಶಿಬಿರ ಸಾಮಗ್ರಿಗಳಿಂದ ಸುಸಜ್ಜಿತನಾಗಿರುವುದಾಗಿ ಸ್ಕೌಟ್ ಮಾಸ್ಟರಿಗೆ ಮನವರಿಕೆ ಮಾಡಬೇಕು.

**ಸೂಚನೆ : ಶಾಂತಿದೂತ ವರ್ತುಲ ಪದಕವನ್ನು ವಿಶ್ವ ಸ್ಕೌಟ್ ಪದಕದ ಸುತ್ತ ಧರಿಸಬಹುದು.**

⌘

# ಅನುಬಂಧ 1

## ಸ್ಕೌಟ್ ಪ್ರವೀಣತಾ ಪದಕಗಳು

ಪ್ರತಿ ಬಾಲಕನೂ ತನ್ನ ಅಭಿರುಚಿಗೆ ತಕ್ಕಂತೆ ಹವ್ಯಾಸಗಳನ್ನೋ ಅಥವಾ ಕರಕುಶಲಕಲೆಗಳನ್ನೋ ಅಭಿವೃದ್ಧಿ ಪಡಿಸಿಕೊಳ್ಳಲು ಅನುಕೂಲವಾಗುವ ಉದ್ದೇಶದಿಂದ ಪ್ರವೀಣತಾ ಪದಕಗಳನ್ನು ಅಳವಡಿಸಲಾಗಿದೆ. ಅವನು ಮುಂದೆ ಪ್ರಪಂಚದಲ್ಲಿ ಕಾಲಿಟ್ಟಾಗ ಧೈರ್ಯಗೆಡದೆ ಅಸಹಾಯಕನೆನಿಸದೆ ಇವುಗಳಲ್ಲಿ ಯಾವುದಾದರೂ ಒಂದನ್ನು ತನ್ನ ವೃತ್ತಿಯನ್ನಾಗಿಸಿಕೊಳ್ಳುವ ಸಾಧ್ಯತೆಯಿದೆ.

ಬಾಲಕನು ಯಾವುದಾದರೊಂದು ವೃತ್ತಿ ಹವ್ಯಾಸವನ್ನು ಆರಿಸಿಕೊಂಡು ಅದರಲ್ಲಿ ಮುಂದುವರೆಯಲು ಉತ್ತೇಜನ ನೀಡುವುದು ಪದಕಗಳ ಉದ್ದೇಶವಾಗಿದೆಯೇ ಹೊರತು, ಅವನು ಅದರಲ್ಲಿ ಪೂರ್ಣ ಪ್ರಮಾಣದ ಪರಿಣಿತನೆಂದು ಪರಿಗಣಿಸುವುದಕ್ಕಲ್ಲ. ಹಾಗಾಗಿ ಹೊರಗಿನವರು ಅವನನ್ನು ಪರೀಕ್ಷಿಸಿ ಹೇಳಲು ವ್ಯವಸ್ಥೆಯನ್ನು ಮಾಡಲಾಗಿದೆ. ಸ್ಕೌಟಿಂಗನ್ನು ಸಾಮರ್ಥ್ಯದ ಅಳತೆ ಗೋಲಾಗಿಸಿ, ವಿಧಿಯುಕ್ತವಾದ ಯೋಜನೆಯನ್ನಾಗಿ ಮಾಡಿದ್ದೇ ಆದರೆ ಆಗ ಸ್ಕೌಟ್ ಶಿಕ್ಷಣದ ಮೌಲ್ಯವೂ ಉದ್ದೇಶವೂ ಮೂಲೆಗುಂಪಾಗಿ ಶಾಲೆಗಳಲ್ಲಿನ ಬೋಧನೆಯಾಗಿ, ಪರಿಣಿತ ಶಿಕ್ಷಕರಿಲ್ಲದೆ ಅವಸ್ಥೆ ಪಡಬೇಕಾಗುತ್ತದೆ.

ಎಲ್ಲಾ ಬಾಲಕರೂ ನಗುನಗುತ್ತಾ ಸ್ವಾಭಿವೃದ್ಧಿ ಹೊಂದಬೇಕು. ಆ ಅಭಿವೃದ್ಧಿಯು ಅವರ ಹೃದಯಾಂತರಾಳದಿಂದ ಬಂದ ಅನಿಸಿಕೆ ಆಗಬೇಕು. ಹೊರಗಿನಿಂದ ಕ್ರಮಬದ್ಧವಾದ ಶಿಕ್ಷಣವನ್ನು ಅವರ ಮೇಲೆ ಹೇರಬಾರದು ಇದು ನಮ್ಮ ಆಶಯವಾಗಿದೆ.

ಪ್ರತಿ ಅಥವಾ ಯಾವುದೇ ಬಾಲಕನು ಹವ್ಯಾಸಗಳನ್ನು ಆರಿಸಿಕೊಂಡು ತನ್ನ ಸಚ್ಚಾರಿತ್ರ್ಯ ಮತ್ತು ಕೌಶಲ್ಯಗಳನ್ನು ಅಭಿವೃದ್ಧಿ ಪಡಿಸಿಕೊಳ್ಳಲು, ಸ್ಕೌಟ್ ಮಾಸ್ಟರನು ಅವಕಾಶ ಮಾಡಿಕೊಟ್ಟು ಬಾಲಕನ ಕುತೂಹಲವನ್ನು ಕೆರಳಿಸುವುದೇ ಸ್ಕೌಟಿಂಗ್‌ನ ಪದಕ ಪದ್ಧತಿಯ ಉದ್ದೇಶವಾಗಿದೆ.

**– ಬೇಡನ್ ಪೊವೆಲ್**

**ಸ್ಕೌಟುಗಳು ತಮ್ಮ ಅಭಿರುಚಿಗೆ ತಕ್ಕಂತೆ ಹವ್ಯಾಸಗಳನ್ನು ಆಯ್ದುಕೊಳ್ಳುವ ಅವಕಾಶಗಳು ವಿಪುಲವಾಗಿವೆ. ಈ ರೀತಿ ಆಯ್ದುಕೊಂಡು ಅಭಿವೃದ್ಧಿ ಪಡೆಯಲು ಅನುಕೂಲವಾಗುವಂತೆ ಸ್ಕೌಟುಗಳಿಗೆ 100 ಪ್ರವೀಣತಾ ಪದಕಗಳಿವೆ. ಈ ಪದಕಗಳ ಪಟ್ಟಿಯನ್ನು ಪುಟ 38, 39, 40ರಲ್ಲಿ ಅಧ್ಯಾಯ-1 ಅಂಶ-15ರಲ್ಲಿ ನೀಡಲಾಗಿದೆ. ಪ್ರತಿ ಪದಕದ ವಿವರಗಳನ್ನು ಅನುಬಂಧ-1ರಲ್ಲಿ ಕೊಡಲಾಗಿದೆ. ಧರಿಸುವ ರೀತಿಯನ್ನು ಅನುಬಂಧ-2ರಲ್ಲಿ ಸಚಿತ್ರವಾಗಿ ತೋರಿಸಲಾಗಿದೆ.**

# ಸ್ಕೌಟ್ ಪ್ರವೀಣತಾ ಪದಕಗಳು

ಪ್ರವೀಣತಾ ಪದಕಗಳನ್ನು ಪಡೆದವರು ವರ್ತಮಾನಕ್ಕೆ ತಕ್ಕಂತೆ, ತಮ್ಮ ಜ್ಞಾನವನ್ನು ಪೂರ್ಣಗೊಳಿಸಿಕೊಳ್ಳಬೇಕು. ಹಾಗಿಲ್ಲದಿದ್ದಲ್ಲಿ ಸೂಕ್ತ ಪ್ರಾಧಿಕಾರವು ಪದಕವನ್ನು ವಾಪಸ್ ಪಡೆಯಬಹುದು.

**1. ಏಡ್ಸ್ ಜಾಗೃತಿ (Aids awareness)**




1. ಹೆಚ್.ಐ.ವಿ. ಹರಡುವಿಕೆ ವಿಧಾನಗಳು ಮತ್ತು ತಡೆಗಟ್ಟುವ ವಿಧಾನಗಳನ್ನು ತಿಳಿದಿರಬೇಕು. ಹಾಗೂ ಅರ್ಥಮಾಡಿ ಕೊಂಡಿರಬೇಕು.
2. ರೋಗದ ಸ್ವಾಭಾವಿಕ ಗುಣಗಳನ್ನು ತಿಳಿದಿರಬೇಕು.
3. ಅದರ ಹರಡುವಿಕೆಯನ್ನು ತಡೆಗಟ್ಟಲು ಆರೋಗ್ಯ ಅಧಿಕಾರಿಗಳು ಕೈಗೊಂಡಿರುವ ಕ್ರಮಗಳ ಬಗ್ಗೆ ತಿಳಿದಿರಬೇಕು.
4. ಈ ಕೆಳಕಂಡ ಅಂಶಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ಒಂದು ಕಾರ್ಯಕ್ರಮವನ್ನು ಯೋಜಿಸಬೇಕು.
   - ಅ. ರೋಗವು ಅಂಟಿದರೆ ಉಂಟಾಗುವ ಅಪಾಯಗಳು.
   - ಆ. ಹರಡುವಿಕೆಯ ವಿಧಾನಗಳು.
   - ಇ. ಹೆಚ್.ಐ.ವಿ. ಸೋಂಕು ಮತ್ತು ಏಡ್ಸ್ ಬಗೆಗಿನ ಮಿಥ್ಯ ಹಾಗೂ ತಪ್ಪು ಮಾಹಿತಿಗಳನ್ನು ನಿವಾರಿಸುವುದು.
   - ಈ. ಒಬ್ಬ ವ್ಯಕ್ತಿಯಲ್ಲಿ ಮತ್ತು ಸಮುದಾಯದಲ್ಲಿ ಇದನ್ನು ತಡೆಗಟ್ಟುವುದರ ವಿಧಾನಗಳು.

**2. ವಿಮಾನ ಗುರುತಿಸುವವ (Air Spotter)**



1. ನಮ್ಮ ದೇಶದಲ್ಲಿ ಸೇವೆಯಲ್ಲಿರುವ ಅರು ಆಧುನಿಕ ಸೈನಿಕ ಮತ್ತು ಆರು ಖಾಸಗಿ ವಿಮಾನಗಳ ಛಾಯಾರೂಪಗಳನ್ನು (Silhoutte) ಪ್ರದರ್ಶಿಸಿದಾಗ 20 ಸೆಕೆಂಡುಗಳ ಅವಧಿಯಲ್ಲಿ ಗುರುತಿಸಬೇಕು.

2. ಗುರುತಿಸಲು ಹಾಗೂ ಅಭ್ಯಸಿಸುವ ಸಲುವಾಗಿ ಮೂರು ವಿಮಾನ ಮಾದರಿ–ಗಳನ್ನು ತಯಾರಿಸಬೇಕು (ಕಿಟ್ ಬಳಸಬಹುದು). ಈ ಮಾದರಿಗಳು ಹಾರುವ ಅಗತ್ಯವಿಲ್ಲ.

3. ಭಾರತದ ಹಾಗೂ ಎರಡು ವಿದೇಶಗಳ ಸೇವೆಯ ಮತ್ತು ಖಾಸಗಿಯ ವಿಮಾನಗಳ ರಾಷ್ಟ್ರೀಯ ಗುರುತುಗಳನ್ನು ತಿಳಿದಿರಬೇಕು.

4. ಮೂರು ತಿಂಗಳಕಾಲ ಆದಷ್ಟೂ ವಿಮಾನಗಳನ್ನು ಗಮನಿಸಿ ಸಾಧ್ಯವಿದ್ದಲ್ಲಿ ಈ ಕೆಳಗಿನ ಅಂಶಗಳನ್ನು ದಾಖಲಿಸಬೇಕು.
   - ನೋಡಿದ ದಿನಾಂಕ, ಕಾಲ ಮತ್ತು ಸ್ಥಳ
   - ಹಾರುತ್ತಿದ್ದ ದಿಕ್ಕು
   - ಸೇವೆಯದೇ ಅಥವಾ ಖಾಸಗಿಯದೇ
   - ವಾಯುಗುಣದ ಸ್ಥಿತಿ
   - ಯಾವ ದೇಶದ್ದು

   **ಅಥವಾ**

   ಹಾರುತ್ತಿರುವ ವಿಮಾನವನ್ನು ಗುರುತಿಸುವ ಕೌಶಲ ಪ್ರದರ್ಶಿಸಬೇಕು.

**3. ಚರ ಚಿಕಿತ್ಸಕ (Ambulanceman)**



ಪದಕವನ್ನು ಎರಡೂ ತೋಳುಗಳ ಹೊಲಿಗೆಯ ಕೆಳಗೆ ಧರಿಸಬೇಕು (ಬಿಳಿಯ ಹಿನ್ನೆಲೆಯ ಮೇಲೆ ಕೆಂಪು ಬಣ್ಣದ ಶಿಲುಬೆ ಹಸಿರು ಉಂಗುರದಿಂದ ಸುತ್ತುವರಿದಿರುತ್ತದೆ).

1. ಪ್ರಥಮ ಸೋಪಾನ, ದ್ವಿತೀಯ ಸೋಪಾನ, ತೃತೀಯ ಸೋಪಾನಗಳ ಪ್ರಥಮ ಚಿಕಿತ್ಸಾ ಪರೀಕ್ಷಾಂಶಗಳ ಪ್ರಶ್ನೆಗಳಿಗೆ ಉತ್ತರಿಸಲು ತಿಳಿದಿರಬೇಕು.

2. ಸಣ್ಣ ಮತ್ತು ದೊಡ್ಡ ರಕ್ತಸ್ರಾವವನ್ನು ನಿಲ್ಲಿಸಲು ಕೈಗೊಳ್ಳುವ ಕ್ರಮವನ್ನು ತಿಳಿದಿರಬೇಕು.

3. ಮುರಿದ ಕಾಲು ಮೂಳೆ, ಕೈ ಮೂಳೆಯನ್ನು ಪತ್ತೆ ಹಚ್ಚುವುದು ಮತ್ತು ಕಟ್ಟುವುದು.

4. **ಹೆಮ್‌ಲಿಚ್** ವಿಧಾನದಿಂದ ಉಸಿರುಕಟ್ಟುವುದನ್ನು ನಿಲ್ಲಿಸುವ ಬಗೆ ತಿಳಿದಿರಬೇಕು.

5. ಬಾಯಿಂದ ಬಾಯಿಗೆ ಕೃತಕ ಉಸಿರಾಟವನ್ನು (ಎಂ.ಎಂ.ಆರ್) ನೀಡುವ ಬಗ್ಗೆ ತಿಳಿದಿರಬೇಕು.

6. ರೋಗಿಗಳನ್ನು ಸಾಗಿಸಲು ಸುಧಾರಿತ ಡೋಲಿಯನ್ನು ತಯಾರಿಸುವುದನ್ನು ಹಾಗೂ ಸುರುಳಿ ಬ್ಯಾಂಡೇಜ್ ಸುತ್ತುವ ಬಗ್ಗೆ ತಿಳಿದಿರಬೇಕು.

7. ಮೌಖಿಕ, ಲಿಖಿತ ಅಥವಾ ದೂರವಾಣಿಯ ಮೂಲಕ ತಪ್ಪಿಲ್ಲದಂತೆ ಸುದ್ಧಿಯನ್ನು ತಲುಪಿಸುವುದನ್ನು ಮಾಡಿ ತೋರಿಸಲು ತಿಳಿದಿರಬೇಕು.

8. ಒಬ್ಬನೇ ಪ್ರಥಮ ಚಿಕಿತ್ಸಕನಿರುವಾಗ ಜೊತೆಗೆ ರೋಗಿಯನ್ನು ಸಾಗಿಸುವ 2 ವಿಧಾನಗಳನ್ನು ತೋರಿಸಬೇಕು. ಮತ್ತು ಇಬ್ಬರು ಪ್ರಥಮ ಚಿಕಿತ್ಸಕರು ಇರುವಾಗ ಮತ್ತೆರಡು ವಿಧಾನಗಳನ್ನು ರೋಗಿಯನ್ನು ಸಾಗಿಸುವ ಬಗೆಯನ್ನು ತೋರಿಸಬೇಕು.

**4. ಬಿಲ್ಲುಗಾರ (Archer)**



1. ಒಂದು ಬಿಲ್ಲು ಮತ್ತು ಬಾಣ ತಯಾರಿಸಿ ಈ ಕೆಳಕಂಡಂತೆ ಅಂಕಗಳನ್ನು ಗಳಿಸಬೇಕು.

   ಅ. 1.2 ಮೀ. (4 ಅಡಿ) ಅಗಲದ ಗುರಿ ಹಲಗೆಯ ಮೇಲೆ, 45.7 ಮೀ. (50 ಗಜ) ದೂರದಿಂದ 30 ಬಾಣಗಳನ್ನು ಬಳಸಿ 60 ಅಂಕಗಳನ್ನು ಗಳಿಸಬೇಕು.

   ಆ. ಇದರೊಂದಿಗೆ 1.2 ಮೀ. (4 ಅಡಿ) ಅಗಲದ ಗುರಿಹಲಗೆಯ ಮೇಲೆ, 36.5 ಮೀ. (40 ಗಜ) ದೂರದಿಂದ 30 ಬಾಣಗಳನ್ನು ಬಳಸಿ 10 ಅಂಕಗಳನ್ನು ಗಳಿಸಬೇಕು.

   ಇ. ಬಿಲ್ವಿದ್ಯೆಯ ಇತಿಹಾಸ ತಿಳಿದಿರಬೇಕು ಹಾಗೂ ಹಿಂದಿನ ಮತ್ತು ಇಂದಿನ ಖ್ಯಾತ ಬಿಲ್ಲುಗಾರರು ಮತ್ತು ಅವರ ಸಾಧನೆಯ ಬಗ್ಗೆ ತಿಳಿದಿರಬೇಕು.

   ಈ. ಒಂದು ವಾರಕಾಲ ಅಥವಾ ಬೇಸಿಗೆ ಶಿಬಿರದಲ್ಲಿ ಕನಿಷ್ಠ ಮೂರು ಸ್ಕೌಟ್‌ಗಳಿಗೆ ಬಿಲ್ವಿದ್ಯೆ ಕಲಿಸಬೇಕು.

**5. ಕಲಾವಿದ (Artist)**



1. ಯಾವುದೇ ರೀತಿಯ ಕಲೆ ಅಥವಾ ಈ ಕೆಳಕಂಡ ರೀತಿಗಳಲ್ಲೊಂದರಲ್ಲಿ ತನ್ನ ಆಸಕ್ತಿ, ಅಭ್ಯಾಸ ಹಾಗೂ ನಿಪುಣತೆಯನ್ನು ಪ್ರದರ್ಶಿಸಬೇಕು.

   ಅ. **ಚಿತ್ರ ಕಲೆ :** ಚಿತ್ರ ಬಿಡಿಸುವುದು (Sketching), ವರ್ಣಚಿತ್ರ ಬಿಡಿಸುವುದು (Painting), ಸುಸ್ಪಷ್ಟ ಚಿತ್ರಕಲೆ (Graphic Art), ಉಬ್ಬು ಕಲೆ (etching), ಮರದ ಕೆತ್ತನೆ (Wood cuts), ಅಕ್ಷರ ಕೆತ್ತನೆ (Lino cut), ಇತ್ಯಾದಿ.

   ಆ. **ಅಲಂಕರಣ ಕಲೆ** (Decorative Art), ಗೋಡೆ ಕಾಗದ ವಿನ್ಯಾಸ (Wall paper design), ನೇಯ್ದ ಬಟ್ಟೆ (Woven fabrics), ಭಿತ್ತಿ ಪತ್ರಗಳು (Posters), ಪುಸ್ತಕಗಳ ಹೊರಕಟ್ಟು ಕಬ್ಬಿಣ ಇತ್ಯಾದಿ.

ಇ. **ಪ್ಲಾಸ್ಟಿಕ್ ಕಲೆ** (Plastic Art), ಜೇಡಿ ಮಣ್ಣಿನ ಮಾದರಿ, ಪ್ಲಾಸ್ಟಿಸಿನ್, ಮಡಕೆ (ವಿನ್ಯಾಸ ಮತ್ತು ರಚನೆ) ಕಲೆ.

ಇ. **ಕೊರೆಯುವುದು** (Carving), ಮರ, ಬಳಸ ಕಲ್ಲು ಅಥವಾ ಸಾಬೂನಿ ನಂತಹ ಅಶಾಶ್ವತ ವಸ್ತುಗಳು.

ಈ. **ಅಕ್ಷರ ಬರೆಯುವಿಕೆ:** ರೋಮನ್ ಲಿಪಿ (ಕನ್ನಡ ಲಿಪಿ) ಇತ್ಯಾದಿ.

ಯಾವುದೇ ಸಂದರ್ಭದಲ್ಲಿಯೂ ಕೆಲಸವು ನಕಲು ಮಾಡಿದ್ದಾಗಿರಬಾರದು. ಅಥವಾ ಅನುಕರಿಸಿದ್ದಾಗಿರಬಾರದು ಹಾಗೂ ಆ ಕಾರ್ಯವನ್ನು ತಾನೇ ಸ್ವತಃ ಮಾಡಿರುವುದಾಗಿ ಗೌರವ ಸಾಕ್ಷಿಯಾಗಿ ಹೇಳಿಕೆ ಕೊಡಲು ಸಿದ್ಧನಿರಬೇಕು.

**ಸೂಚನೆ :** 1. ರಾಷ್ಟ್ರೀಯ ಸಮಸ್ಯೆಗಳಾದ ಸಂರಕ್ಷಣೆ, ಜನಸಂಖ್ಯೆ ಶಿಕ್ಷಣ ಇತ್ಯಾದಿಗಳೇ ಕಲೆಯ ವಿಷಯವಸ್ತುವಾಗಿರಬೇಕು.

2. ತನ್ನ ಮೇರುಕೃತಿಯನ್ನು ತಯಾರಿಸಿ, ದಳದ ಕಛೇರಿಯಲ್ಲಿ ಪ್ರದರ್ಶಿಸಬೇಕು. ಅಥವಾ ದುರ್ಬಲ ಮಗುವಿಗೆ ಬಹುಮಾನ ನೀಡಬೇಕು.

3. ಯಾವುದಾದರೂ ಒಂದು ವಸ್ತು ಅಥವಾ ವಸ್ತುಗಳ ಗುಂಪಿನ ರೇಖಾ ಕೃತಿಯನ್ನಾಗಲಿ, ಅಥವಾ (1)ರಲ್ಲಿ ಆರಿಸಿಕೊಂಡು ವಿಷಯದ ಬಗ್ಗೆ ವಿನ್ಯಾಸವನ್ನಾಗಲಿ, ಪರೀಕ್ಷಕರ ಸಮ್ಮುಖದಲ್ಲಿ ಮಾಡಬೇಕು.

**6 ಕ್ರೀಡಾಪಟು (Athlete)**



1. ಪಂದ್ಯಕ್ಕೆ ಮುನ್ನ ಕುಳಿತುಕೊಳ್ಳುವ, ನಿಲ್ಲುವ, ನಡೆಯುವ, ಓಡುವ ರೀತಿಗಳನ್ನು ಮತ್ತು ಪಂದ್ಯವನ್ನು ಪ್ರಾರಂಭಿಸುವ ವಿಧಾನಗಳನ್ನು ಪ್ರದರ್ಶಿಸಬೇಕು.
2. ಸರಿಯಾದ ತರಬೇತಿ ಪಡೆದಿರುವ ಬಗ್ಗೆ ಮತ್ತು ಸಕ್ರಮವಾದ ಹೊರಾಂಗಣ ವ್ಯಾಯಾಮ ಮಾಡುತ್ತಿರುವುದರ ಬಗ್ಗೆ ಪುರಾವೆ ನೀಡಬೇಕು.
3. ಈ ಕೆಳಗಿನವುಗಳಲ್ಲಿ ಯಾವುದಾದರೂ 4ರಲ್ಲಿ ಅಂಕಗಳನ್ನು ಗಳಿಸಬೇಕು.

**12 ರಿಂದ 14 ವರ್ಷಗಳು**

**ವಯಸ್ಸಿಗನುಗುಣವಾಗಿ**

| | |
|---|---|
| 12 ವರ್ಷ | 26 ಅಂಕಗಳು |
| 13 ವರ್ಷ | 30 ಅಂಕಗಳು |
| 14 ವರ್ಷ | 36 ಅಂಕಗಳು |

| ಸ್ಪರ್ಧೆ | ನಿರ್ದಿಷ್ಟಮಾನ 6 ಅಂಕಗಳು | ಪ್ರಥಮ ಶ್ರೇಣಿ 8 ಅಂಕಗಳು | ವಿಶೇಷ 10 ಅಂಕಗಳು |
|---|---|---|---|
| 1. 100 ಮೀ. ಓಟ | 16. ಸೆ. | 15.ಸೆ. | 14.ಸೆ. |
| 2. 800 ಮೀ. ಓಟ | 2 ನಿ. 46 ಸೆ. | 2 ನಿ. 43 ಸೆ. | 2 ನಿ. 40 ಸೆ. |
| 3. ಓಟದಲ್ಲಿ ಎತ್ತರ ಜಿಗಿತ | 1.06 ಮೀ. | 1.13 ಮೀ. | 1.2 ಮೀ. |
| 4. ಓಟದಲ್ಲಿ ಉದ್ದ ಜಿಗಿತ | 3.8 ಮೀ. | 4.1 ಮೀ. | 4.4 ಮೀ. |
| 5. ಕ್ರಿಕೇಟ್ ಬಾಲ್ ಎಸೆತ | 36.5 ಮೀ. | 41 ಮೀ. | 46 ಮೀ |
| ಅಥವಾ | | | |
| ಗುಂಡು ಎಸೆತ (8.11 ಪೌಂ.) | 6.1 ಮೀ. | 7.62 ಮೀ. | 8. 53 ಮೀ. |

## 15 ರಿಂದ 17 ವರ್ಷಗಳು

ವಯಸ್ಸಿಗನುಗುಣವಾಗಿ ಈ ಕೆಳಗಿನವುಗಳಲ್ಲಿ ಯಾವುದಾದರೂ 5ರಲ್ಲಿ ಅಂಕ ಗಳಿಸಬೇಕು

| | |
|---|---|
| 15 ವರ್ಷ | 40 ಅಂಕಗಳು |
| 16 ವರ್ಷ | 45 ಅಂಕಗಳು |
| 17 ವರ್ಷ | 50 ಅಂಕಗಳು |

| ಸ್ಪರ್ಧೆ | ನಿರ್ದಿಷ್ಟಮಾನ 8 ಅಂಕಗಳು | ಪ್ರಥಮ ಶ್ರೇಣಿ 10 ಅಂಕಗಳು | ವಿಶೇಷ 12 ಅಂಕಗಳು |
|---|---|---|---|
| 1. 100 ಮೀ. ಓಟ | 15. ಸೆ. | 14.ಸೆ. | 13.ಸೆ. |
| 2. 800 ಮೀ. ಓಟ | 3 ನಿ. 20 ಸೆ. | 3 ನಿ. 10 ಸೆ. | 2 ನಿ. 40 ಸೆ. |
| 3. ಓಟದಲ್ಲಿ ಎತ್ತರ ಜಿಗಿತ | 104.14 ಸೆ.ಮೀ. | 121.92 ಸೆ.ಮೀ. | 137.16 ಸೆ.ಮೀ. |
| 4. ಓಟದಲ್ಲಿ ಉದ್ದ ಜಿಗಿತ | 3.66 ಮೀ. | 3.96 ಮೀ. | 4.47 ಮೀ. |
| 5. ಗುಂಡು ಎಸೆತ (13 ಪೌಂ.) | 6.1 ಮೀ. | 7.62 ಮೀ. | 8. 53 ಮೀ. |
| ಅಥವಾ ಕ್ರಿಕೇಟ್ ಬಾಲ್ ಎಸೆತ | 38.1 ಮೀ. | 47.72 ಮೀ. | 50.96 ಮೀ |
| 6. ದಂಡ ಹೊಡೆಯುವುದು | 86 ಸೆ.ಗಳಲ್ಲಿ 15 | 1 ನಿ. 10 ಸೆ. ಗಳಲ್ಲಿ 30 | 2 ನಿ.ಗಳಲ್ಲಿ 50 |
| ಬೈಠಕ್ (Squatthrust) | – | – | 30 ಸೆ.ಗಳು |

## 7. ವೈಮಾನಿಕ (ಏವಿಯೇಟರ್)

(ಈ ಪದಕವು ವಾಯು ಸ್ಕೌಟ್‌ಗಳಿಗೆ ಮುಕ್ತವಾಗಿದೆ)

1. ಅ. ವಿಮಾನ ನಿಲ್ದಾಣದಲ್ಲಿರುವಾಗ ಅಥವಾ ವಿಮಾನದ ಬಳಿ ಇರುವಾಗ ಅನುಸರಿಸ–ಬೇಕಾದ ಸಾಮಾನ್ಯ ಮುನ್ನೆಚ್ಚರಿಕೆ ಕ್ರಮಗಳನ್ನು ತಿಳಿದಿರಬೇಕು.

ಆ. ಹಗಲು ಮತ್ತು ರಾತ್ರಿಯ ವೇಳೆಗಳಲ್ಲಿ ವಿಮಾನವು ಇಳಿಯುವ ಸಲುವಾಗಿ ಗಾಳಿಬೀಸುವ ದಿಕ್ಕನ್ನು ಹೇಳಲು ಬರಬೇಕು. ಹಾಗೂ ವಿಮಾನವು ವಿಮಾನ ರಸ್ತೆಯಲ್ಲಿ ಚಲಿಸಲು ಮತ್ತು ಎಳೆದೊಯ್ಯಲು (Taxing) (Tehering) ಸಹಾಯ ಮಾಡಬೇಕು.



ಇ. ಬೆಣೆಗಳನ್ನು (chocks) ಉಪಯೋಗಿಸಲು, ಸುಧಾರಿಸಲು ತಿಳಿದಿರಬೇಕು. ನಿಲುಗಡೆಯಲ್ಲಿರುವ ಅಥವಾ ಚಲಿಸುತ್ತಿರುವ ವಿಮಾನದಿಂದ ಜನರನ್ನು ದೂರದಲ್ಲಿರಿಸುವುದರ ಪ್ರಾಮುಖ್ಯತೆಯನ್ನು ತಿಳಿದಿರಬೇಕು. ಅಪಘಾತಕ್ಕೊಳಗಾದ ಯಂತ್ರದ ಅಥವಾ ಯಂತ್ರಭಾಗಗಳನ್ನು ಪೋಲಿಸ್ ಅಥವಾ ಸಂಬಂಧ ಪಟ್ಟ ಅಧಿಕಾರಿಗಳು ಬರುವವರೆಗೆ, ತಲ್ಲಣಿಸದಂತೆ (undisturbed) ನೋಡಿಕೊಳ್ಳಬೇಕಾದ ಅವಶ್ಯಕತೆಯನ್ನು ತಿಳಿದಿರಬೇಕು.

ಈ. ವಿಮಾನವು ಇಳಿಯಲು, ಸಮಂಜಸವೆನಿಸುವ ಮೈದಾನವು ಹೇಗಿರಬೇಕೆಂಬ ಬಗ್ಗೆ ತಿಳಿಸಬೇಕು ಮತ್ತು ತಮ್ಮ ಆಸುಪಾಸಿ ನಲ್ಲಿ 3 ಅಂತಹ ಇಳಿದಾಣಗಳನ್ನು ಹೆಸರಿಸಬೇಕು. ದಳದ ಕೇಂದ್ರ ಸ್ಥಾನದಿಂದ 80 ಕಿ.ಮೀ. ಫಾಸಲೆಯಲ್ಲಿ ಬರುವ ಪ್ರಮುಖ ವಿಮಾನ ನಿಲ್ದಾಣಗಳಿಗೆ ಅನ್ವಯಿಸುವ ದಿಕ್ಸೂಚಿ (compass) ದಿಕ್ಕುಗಳನ್ನು ತಿಳಿದಿರಬೇಕು.

2. ವಿಮಾನ ನಿಲ್ದಾಣದ ಮತ್ತು ವಿಮಾನದ ಹಾರಿಕೆಯ ಸಿದ್ಧಾಂತದ ಬಗ್ಗೆ ತಿಳುವಳಿಕೆ ಇರಬೇಕು.

3. ಮಾದರಿ ವಿಮಾನಗಳನ್ನು ರಚಿಸಬೇಕು (ಇದಕ್ಕೆ 'ಕಿಟ್' ಉಪಯೋಗಿಸ ಬಹುದು) ಅದು ಈ ಕೆಳಕಾಣಿಸಿರುವಂತೆ ಕನಿಷ್ಠ ಹಾರಬೇಕು.

**ಗ್ಲೈಡರ್:** i) ಕೈಯಿಂದ ಹಾರಿಸುವುದು. 25 ಸೆಕೆಂಡ್‌ಗಳು

ii) ಗರಿಷ್ಠ 60 ಮೀ. ಉದ್ದದ ದಾರದ ಆಧಾರದಲ್ಲಿ ಎಳೆತ ಹಾರಿಕೆ (Tow Launch) 45 ಸೆಕೆಂಡುಗಳು.

**ವಿಮಾನ:** i) ರಬ್ಬರ್ ಪವರ್ – 30 ಸೆಕೆಂಡುಗಳು

ii) ಎಂಜಿನ್ ಪವರ್ – ನಿಯಂತ್ರ ಸಹಿತ (ಗರಿಷ್ಠ ಸೆಕೆಂಡುಗಳು ಮೋಟಾರ್ ಓಡಬೇಕು) 45 ಸೆಕೆಂಡುಗಳು

ತಮ್ಮ ಮಾದರಿಯನ್ನು (Model) ಸುಸೂತ್ರವಾಗಿ ಮೇಲೆ ಹಾರಿಸುವುದು; 2 ಮೀ ಅಂತರದ 3 ವಿವಿಧ ಎತ್ತರಗಳಲ್ಲಿ ಹಾರಿಸುವುದು ಮತ್ತು ಏರುವುದು ಮತ್ತು ಮುಮ್ಮುಖವಾಗಿ ಕೆಳಜಿಗಿಯುವುದು ಹಾಗೂ ಸುಸೂತ್ರವಾಗಿ ಭೂಮಿಯ ಮೇಲೆ ಇಳಿಯುವುದನ್ನು ಪ್ರದರ್ಶಿಸಬೇಕು.

**8. ಕಗ್ಗಾಡು ಜೀವಿ (Backwoodsman)**

1. ಸ್ಥಳೀಯವಾಗಿ ದೊರಕುವ ಸಾಮಗ್ರಿಗಳಿಂದ ಇಬ್ಬರು ವ್ಯಕ್ತಿಗಳಿಗೆ ಸರಿಹೊಂದುವಂತೆ ಆಶ್ರಯ ತಯಾರಿಸಬೇಕು. ಒಬ್ಬನೇ (ಅಪೇಕ್ಷಣೀಯ) ಅಥವಾ ಇನ್ನೊಬ್ಬ (ದ್ವಿತೀಯ ಸೋಪಾನ್ ಸ್ಕೌಟ್‌ನನ್ನು ಹೊರತು ಪಡಿಸಿ) ಸ್ಕೌಟ್‌ನ ಜೊತೆ ಕನಿಷ್ಠ ಒಂದು ರಾತ್ರಿ ಅದರಲ್ಲಿ ತಂಗಬೇಕು.



2. ಪಾತ್ರೆಗಳನ್ನು ಬಳಸದೆ, ರಾತ್ರಿಯಲ್ಲಿ ತನ್ನ ಆಹಾರ ತಯಾರಿಸಿಕೊಳ್ಳಬೇಕು. (ದಳದ ಶಿಬಿರಗಳನ್ನು ಈ ಪರೀಕ್ಷೆಗಾಗಿ ಗಣನೆಗೆ ತೆಗೆದುಕೊಳ್ಳಬಾರದು)
3. ಆರಂಭದಲ್ಲಿ ಕಾಣದ, ನಿರ್ದಿಷ್ಟಗೊಳಿಸಿದ ಸ್ಥಳವನ್ನು ತಲುಪಲು, ಅಪರಿಚಿತ ಸ್ಥಳದಲ್ಲಿ ಒಂಟಿಯಾಗಿ, ರಸ್ತೆಯ ನಕ್ಷೆ ಬಳಸದೆ, ಯಾರನ್ನೂ ವಿಚಾರಿಸದೆ ದಾರಿ ಕಂಡುಕೊಳ್ಳುವ ಕೌಶಲವನ್ನು ಪ್ರದರ್ಶಿಸಬೇಕು.
   - i) ಹಗಲಿನ ವೇಳೆಯಲ್ಲಿ ದಿಕ್ಸೂಚಿಯನ್ನು ಬಳಸಿ ಕನಿಷ್ಠ 5 ಕಿ.ಮೀ. ದೂರವನ್ನು ಕ್ರಮಿಸಬೇಕು.
   - ii) ರಾತ್ರಿಯ ವೇಳೆಯಲ್ಲಿ, ನಕ್ಷತ್ರಗಳ ಸಹಾಯದಿಂದ ಕನಿಷ್ಠ 2. ಕಿ.ಮೀ. ದೂರವನ್ನು ಕ್ರಮಿಸಬೇಕು.
4. ಪ್ರೈಮಸ್ ಸ್ಟೌ ಬಳಸಿ ತನ್ನ ಆಹಾರವನ್ನು ತಯರಿಸಿಕೊಳ್ಳಬೇಕು.
5. ಅಗ್ರಗಾಮಿತ್ವದಲ್ಲಿ ತೃತೀಯ ಸೋಪಾನ್ ಮಟ್ಟವನ್ನು ಪಡೆದಿರಬೇಕು.
6. ಪ್ರಥಮ ಚಿಕಿತ್ಸೆ ಪೆಟ್ಟಿಗೆಯನ್ನು ಉಪಯೋಗಿಸಲು ತಿಳಿದಿರಬೇಕು. ಅರಕ್ಷಿತ ಕುಡಿಯುವ ನೀರಿನ ಬಳಕೆಯಿಂದಾಗುವ ಅಪಾಯಗಳನ್ನು ತಿಳಿದಿರಬೇಕು ಮತ್ತು ಅಂತಹ ನೀರನ್ನು ಶುದ್ಧಿ ಗೊಳಿಸುವ ವಿಧಾನಗಳನ್ನು ಅರಿತಿರಬೇಕು.
7. ತಾನು ವಾಸಿಸುವ ಪ್ರದೇಶದಲ್ಲಿರಬಹುದಾದ ಎರಡು ವಿಷದ ಹಾವುಗಳನ್ನು ಗುರುತಿಸಬೇಕು ಹಾಗೂ ಹಾವು ಕಡಿತದ ನಿರ್ವಹಣೆ ಬಗ್ಗೆ ತಿಳಿದಿರಬೇಕು.
8. ಕುಡಿಯುವುದಕ್ಕಾಗಿ ನೀರನ್ನು ಶೋಧಿಸುವ ಒಂದು ಶೀತಕ ಉಪಕರಣ ತಯಾರಿಸಬೇಕು ಮತ್ತು ನೀರನ್ನು ಕುಡಿಲು ಯೋಗ್ಯವಾಗಿ ಮಾಡುವ ಕ್ರಮವನ್ನು ಪ್ರದರ್ಶಿಸಬೇಕು.

## 9. ಬುಟ್ಟಿ ತಯಾರಕ (Basket Maker)



1. ಬುಟ್ಟಿ ತಯಾರಿಕೆಯಲ್ಲಿ ಬಳಸುವ ಕಚ್ಚಾ ಪದಾರ್ಥ-ಗಳ ಬಗ್ಗೆ ತಿಳುವಳಿಕೆ ಹೊಂದಿರ ಬೇಕು.
2. ಕಚ್ಚಾ ಪದಾರ್ಥಗಳನ್ನು ಎಲ್ಲಿಂದ ಪಡೆಯುತ್ತಾರೆ? ಮತ್ತು ಅವುಗಳನ್ನು ಅಣಿಗೊಳಿಸುವ ಕ್ರಮವನ್ನು ತಿಳಿದಿರಬೇಕು.
3. ಬಿದಿರು, ಬೆತ್ತ, ಜೊಂಡು ಹುಲ್ಲು ಅಥವಾ ಇತರ ನೈಸರ್ಗಿಕ ವಸ್ತುಗಳನ್ನು ಬಳಸಿ ಉಪಯೋಗಕ್ಕೆ ಬರುವಂತಹ ವಸ್ತುವನ್ನು ತಾನೇ ತಯಾರಿಸಬೇಕು.

## 10. ಜೇನು ಪಾಲಕ (Bee Warden)



1. ಜೇನುಹುಳಗಳನ್ನು, ಗುಂಪುಗೂಡಿಸುವುದು ಹಂಚುವುದು ಮತ್ತು ಜೇನುಗೂಡುಗಳನ್ನು ಸೇರಿಸುವುದು ಮುಂತಾದವುಗಳನ್ನು ಅಭ್ಯಾಸ ಮಾಡಿ ತಿಳಿದುಕೊಳ್ಳಬೇಕು. ಕೃತಕ ಪೋಷಣೆ ಮತ್ತು ಸಾಮಾನ್ಯ ನಿರ್ವಹಣೆ ಬಗ್ಗೆ ತಿಳಿದಿರಬೇಕು.
2. ಜೇನುಗೂಡನ್ನು ಹೊಂದಿದ್ದು, ಕನಿಷ್ಠ 6 ತಿಂಗಳ ಕಾಲ ಜೇನ್ನೊಣಗಳ ಗುಂಪನ್ನು ನಿರ್ವಹಿಸಬೇಕು ಮತ್ತು ತನ್ನದೇ ಜೇನುಗೂಡಿನಿಂದ 1.35 ಕೆ.ಜಿ. (3 ಪೌಂಡು) ಜೇನು ತುಪ್ಪವನ್ನು ಸಂಗ್ರಹಿಸಬೇಕು.
3. ತನ್ನದೇ ಆದ ಜೇನುಗೂಡು ಪೆಟ್ಟಿಗೆಯನ್ನು ತಯಾರಿಸಬೇಕು.
4. 5 ಅಥವಾ 6 ಮಂದಿ ಗ್ರಾಮಾಂತರ/ಕೊಳಚೆ ಪ್ರದೇಶದ ಯುವಕರನ್ನು ಹುರಿದುಂಬಿಸಿ ಅವರದೇ ಜೇನುಗೂಡುಗಳನ್ನು ಆರಂಭಿಸುವಂತೆ ಮಾಡಬೇಕು.
5. ಕೃಷಿ ಇಲಾಖೆಯ (ಕರ್ನಾಟಕದಲ್ಲಿ ಕೈಗಾರಿಕೆ-ವಾಣಿಜ್ಯ ಇಲಾಖೆ) ಅಧಿಕಾರಿಗಳನ್ನು ಭೇಟಿಮಾಡಿ ಹೆಚ್ಚಿನ ಮಾಹಿತಿ ಸಲಹೆಗಳನ್ನು ಪಡೆಯಿರಿ.

## 11. ಪಕ್ಷಿ ಪಾಲಕ (Bird Warden)



1. ತನ್ನ ಜಿಲ್ಲೆಯಲ್ಲಿ ಅಪಾಯಕ್ಕೊಳಗಾಗಿರುವ ಪಕ್ಷಿ ಸಂಕುಲಗಳ ಚಿತ್ರಗಳನ್ನು, ಚಿತ್ರಪಟಗಳನ್ನು ತಯಾರಿಸಿ ಅವುಗಳನ್ನು ತನ್ನ ಗ್ರಾಮದಲ್ಲಿ / ಮೊಹಲ್ಲಾದಲ್ಲಿ ಪ್ರದರ್ಶಿಸಬೇಕು.
2. ವಿವಿಧ ಪಕ್ಷಿಸಂಕುಲಗಳಿಗಾಗಿ, ಬೇರೆ ಬೇರೆ ವಿಧಧ ಮೂರು ಗೂಡು ಪೆಟ್ಟಿಗೆಗಳನ್ನು ತಯಾರಿಸಿ, ಅವುಗಳನ್ನು ಅತ್ಯಂತ ಪ್ರಯೋಜನಕಾರಿಯಾಗಿ ಬಳಸಬೇಕು.

3. ತನ್ನ ಜಿಲ್ಲೆಯ ಪಕ್ಷಿಗಳಿಗಾಗಿ ಆಹಾರದ ಮನೆಗಳು, ಆಹಾರದ ಮೇಜು, ಆಹಾರದ ಕಂಬಗಳ ಮೂಲಕ ಕನಿಷ್ಠ 3 ತಿಂಗಳ ಕಾಲ ಪೋಷಿಸಬೇಕು.
4. ತನ್ನ ಜಿಲ್ಲೆಯ ಏಳು ಬಗೆಯ ಪಕ್ಷಿಗಳ ಸ್ವಭಾವ, ಕೂಗು ಹಾಗೂ ಬಾಹ್ಯ ಚಹರೆಗಳು (ರೆಕ್ಕೆ ಗಾತ್ರ ಇತ್ಯಾದಿ) ಇವುಗಳ ಬಗ್ಗೆ ಪರಿಚಯ ಹೊಂದಿದ್ದು, ಟಿಪ್ಪಣಿಮಾಡಿ, ಒಂದು ಪುಸ್ತಕ ತಯಾರಿಸಬೇಕು.
5. ಯಾವುದಾದರೂ ಒಂದು ಪಕ್ಷಿಯ (ರಾಷ್ಟ್ರೀಯ ಪಕ್ಷಿಯನ್ನು ಹೊರತು ಪಡಿಸಿ) ಬಗ್ಗೆ ಹಾಗೂ ಅದರ ಗೂಡಿನ ಬಗ್ಗೆ 3 ತಿಂಗಳ ದಾಖಲೆ ಇಡಬೇಕು.

ಅಥವಾ

ಕನಿಷ್ಠ 5 ಪಾರಿವಾಳಗಳು / ಇತರ ಯಾವುದೇ 5 ಪಕ್ಷಿಗಳನ್ನು ಕನಿಷ್ಠ ಮೂರು ತಿಂಗಳ ಕಾಲ ಸಾಕಬೇಕು ಹಾಗೂ ಸ್ಕೌಟ್ ಮಾಸ್ಟರ್‌ಗೆ ವರದಿ ಸಲ್ಲಿಸುವುದು.

ಅಥವಾ

ಸಮೀಪದ ರಾಷ್ಟ್ರೀಯ ಉದ್ಯಾನಕ್ಕೆ ಭೇಟಿ ನೀಡಬೇಕು ಮತ್ತು ಸ್ಕೌಟ್ ಮಾಸ್ಟರಿಗೆ ವರದಿ ಸಲ್ಲಿಸಬೇಕು.

ದಾಖಲೆ ಪುಸ್ತಕದಲ್ಲಿ ಈ ಕೆಳಕಂಡ ಅಂಶಗಳನ್ನು ನಮೂದಿಸಬೇಕು. ಪಕ್ಷಿಯ ಹೆಸರು, ಪ್ರಥಮ ಬಾರಿಗೆ ನೋಡಿದ ಅಥವಾ ಕೇಳಿದ ದಿನಾಂಕ, ಗೂಡನ್ನು ನೋಡಿದ ದಿನಾಂಕ, ಮರ/ಪೊದೆಯ ವೈವಿಧ್ಯ, ನೆಲದಿಂದ ಗೂಡು ಇರುವ ಎತ್ತರ, ಮೊಟ್ಟೆಗಳು ಅಥವ ಮರಿಗಳ ಸಂಖ್ಯೆ, ಗೂಡನ್ನು ಬಿಟ್ಟ ದಿನಾಂಕ, ಈ ಅಂಶಗಳ ಬಗ್ಗೆ ಷರಾ ಬರೆಯಬೇಕು.

**12. ಅಂಬಿಗ (Boatman)**

1. "ಹುಟ್ಟು ಹಾಕುವವ" (Oarsman) ಪದಕ ಪಡೆದಿರಬೇಕು.
2. ದೋಣಿಯನ್ನು ನಡೆಸಬೇಕು. ಹಾಯಿ ಪಟದ ಹಗ್ಗ ಕಟ್ಟಬೇಕು, ಹಾಯಿ ಪಟ ಸರಿಪಡಿಸಬೇಕು, ಹಾಯಿ ಪಟ ಏರಿಸಬೇಕು ಮತ್ತು ಕಡಿಮೆ ಮಾಡಬೇಕು.



3. ಹಾಯಿ ಪಟವನ್ನು ಮಡಚಿ ಬಿಗಿಯಾಗಿ ಕಟ್ಟಲು ಅಣಿಗೊಳಿಸಬೇಕು.
4. ಹಡಗಿನ ಸಜಾವಣೆ (rig) ಅಥವ ಬಾಹ್ಯ ಆಕೃತಿಯ ಆಧಾರದ ಮೇಲೆ ಇಂದಿನ ಹಾಯಿ ದೋಣಿ ಮತ್ತು ಹಡಗುಗಳ ಸಾಮಾನ್ಯ ವಿಧಗಳನ್ನು ಗುರುತಿಸಬೇಕು.

5. ಸಮುದ್ರ ಲಂಗರಿನ ತಯಾರಿ, ಉಪಯೋಗಗಳನ್ನು ತಿಳಿದಿರಬೇಕು.

6. ಸಮುದ್ರ ಪಥ ತಿಳಿದಿರಬೇಕು.

**13. ಪುಸ್ತಕ ರಟ್ಟುಕಟ್ಟುವವ (Book Binder)**



ಪುಸ್ತಕಕ್ಕೆ ರಟ್ಟು ಕಟ್ಟುವ ಕಾರ್ಯದಲ್ಲಿ ಈ ಕೆಳಗಿನ ಕೆಲಸಗಳನ್ನು ಮಾಡಬೇಕು.

1. ವಿವಿಧ ಭಾಗಗಳನ್ನು ಹೊಲಿಯಲು ಸಿದ್ಧಗೊಳಿಸುವುದು ಹಾಗೂ ಆ ಭಾಗಗಳನ್ನು ಟೇಪ್ ಮೇಲೆ ಹೊಲಿಯುವುದು.

2. ಕೊನೆಯ ಕಾಗದದ ತುದಿಗಳನ್ನು ಮಡಚಿ ಅಂಟಿಸುವುದು. ತೆಳುವಾದ ಬಟ್ಟೆಯ ಲೈನಿಂಗ್ ಹಾಕುವುದು ಮತ್ತು ಎರಡನೆಯ ಲೈನಿಂಗ್ ಹಾಕುವುದು.

3. ದಪ್ಪ ರಟ್ಟನ್ನು ಕತ್ತರಿಸಿ, ಬಟ್ಟೆ ಅಥವಾ ಪೇಪರ್‌ನಿಂದ ಮುಚ್ಚಿ ಪುಸ್ತಕವನ್ನು ಪೆಟ್ಟಿಗೆಯಲ್ಲಿಡುವುದು.

4. ಶಾಲೆಯ ಗ್ರಂಥಾಲಯದ, ಅಥವಾ ನಿಮ್ಮ ಗುಂಪಿನ ಒಬ್ಬ ಬಡ ವಿದ್ಯಾರ್ಥಿ / ಅಂಗವಿಕಲ ಬಾಲಕನ, ಎರಡು ಪಠ್ಯ ಪುಸ್ತಕಗಳಿಗೆ ರಟ್ಟು ಕಟ್ಟಬೇಕು.

5. ಮತ್ತೊಬ್ಬ ಸ್ಕೌಟ್‌ಗೆ ಅಥವಾ ಸ್ನೇಹಿತನಿಗೆ ರಟ್ಟುಕಟ್ಟುವ ಕಲೆಯನ್ನು ಕಲಿಸುವುದು.

**14. ಬ್ರೈಲ್ ಲಿಪಿ (Braille)**



1. 3 ದೊಡ್ಡ ಹಾಳೆಗಳಲ್ಲಿರುವ ಬ್ರೈಲ್ ಲಿಪಿಯನ್ನು 10 ತಪ್ಪುಗಳಿಗಿಂತ ಹೆಚ್ಚಿಲ್ಲದಂತೆ ನಕಲು ಮಾಡಬೇಕು. ಮತ್ತು ಗ್ರೇಡ್ 1 ರ ಲಿಪಿಯನ್ನು ನೋಟ ಅಥವಾ ಸ್ಪರ್ಶದ ಮೂಲಕ ಓದ ಬೇಕು. ಮಧ್ಯ ಸಾಲುಗಳಲ್ಲಿ ಎರಡೂ ಕಡೆ ಬರೆದಿರುವ ಪದ್ಯವನ್ನೂ ಸಹ ಓದಬೇಕು.

2. ಅಂಧ ವಿದ್ಯಾರ್ಥಿ ಅಥವಾ ವ್ಯಕ್ತಿಗಾಗಿ, ದಿನಕ್ಕೆ ಒಂದು ಗಂಟೆಯಂತೆ ಒಂದು ವಾರ ಕಾಲ ಪುಸ್ತಕ ಓದಬೇಕು.

**15. ಒಂಟೆ ಸವಾರ (Camel Man)**

1. ಮರಳುಗಾಡು ಪ್ರದೇಶದಲ್ಲಿ ಸಾಮಾನ್ಯವಾಗಿ ಉಪಯೋಗಿಸುವ ಸಾಗಾಣಿಕೆಯ ಕ್ರಮವನ್ನು ತಿಳಿದಿರಬೇಕು.

2. 'ಮರಳು ಗಾಡಿನ ಜಹಜು' ಎಂದು ಕರೆಯುವ 'ಒಂಟೆ ಬಗ್ಗೆ ತಿಳಿವಳಿಕೆ ಇರಬೇಕು. ಅವುಗಳ ವೈವಿಧ್ಯತೆ, ಮತ್ತು ತಳಿಗಳ ಬಗ್ಗೆ ತಿಳಿದಿರಬೇಕು. ಉತ್ತಮ ಒಂಟೆಯ ಲಕ್ಷಣಗಳು; ಸ್ವಭಾವ; ಸಹಜ ಗುಣಗಳು; ಆಹಾರು ಮತ್ತು ನೀರು; ನಡಿಗೆಯ ಭಂಗಿ ಮತ್ತು ವೇಗ: ಚಳಿಗಾಲದ ವಿಕಲತೆ ಮತ್ತು ಅದರಿಂದ ರಕ್ಷಣೆ; ಜೀನು (saddle) ಚೌಕಟ್ಟು (frame) ಮತ್ತು ಆಸನ(Dol)ಗಳಿಗಿರುವ ವ್ಯತ್ಯಾಸ ಹಾಗೂ ಒಂಟೆಗಳನ್ನು ಸಜ್ಜುಗೊಳಿಸುವುದು ತಿಳಿದಿರಬೇಕು. ಒಂಟೆಗಳಿಗೆ ತಗುಲುವ ಸಾಮಾನ್ಯ ರೋಗಗಳು ಮತ್ತು ಅವುಗಳಿಗೆ ಮಾಡಬಹುದಾದ ಪ್ರಥಮ ಚಿಕಿತ್ಸೆ ತಿಳಿದಿರಬೇಕು. ಒಂಟೆಗಳನ್ನು ಗೋರ್ ಬೌಂಡ್, ಝೂಲಾ ಇತ್ಯಾದಿಗಳಿಂದ ಅಲಂಕರಿಸಲು ತಿಳಿದಿರಬೇಕು.



3. **ಚಾರಣ** : ರಾತ್ರಿ ಅಥವಾ ಹಗಲು ವೇಳೆಗಳಲ್ಲಿ ಒಂಟೆಯ ಮೇಲೆ ಸವಾರಿ ಮಾಡುತ್ತಾ ಪ್ರಯಾಣ ಮಾಡುವ ಬಗ್ಗೆ ಇರುವ ಸಂಪ್ರದಾಯ ಗಳನ್ನು ತಿಳಿದಿರಬೇಕು.

   i) ನಕ್ಷತ್ರಗಳ ಸಹಾಯದಿಂದ ಸಮಯ ಮತ್ತು ದಿಕ್ಕುಗಳನ್ನು ತಿಳಿಸಲು ಬರಬೇಕು.

   ii) ಮರಳುಗಾಡಿನಲ್ಲಿ ಕಾಲುನಡಿಗೆಯಲ್ಲಿ ಪ್ರಯಾಣ ಮಾಡುವಾಗ ಅನುಸರಿಸಬೇಕಾದ ನಿಯಮಗಳ ಅರಿವಿರಬೇಕು. ಮತ್ತು ಸೂರ್ಯನ ಝಳಕ್ಕೆ ಜ್ಞಾನ ತಪ್ಪುವುದು (sun stroke) ಮತ್ತು ಬಾಯಾರಿಕೆ ಇವುಗಳಿಂದ ರಕ್ಷಿಸಿಕೊಳ್ಳುವ ಬಗ್ಗೆ ತಿಳಿದಿರಬೇಕು.

   iii) ಒಬ್ಬ ಗೆಳೆಯನೊಡನೆ ಒಟ್ಟಿನಲ್ಲಿ 48 ಕಿ.ಮೀ. (30 ಮೈಲಿ) ಒಂಟೆ ಸವಾರಿ ಪ್ರಯಾಣ ಮಾಡಬೇಕು. ಪ್ರತಿಪ್ರಯಾಣವೂ ಕನಿಷ್ಠ 16 ಕೀ.ಮೀ. (10 ಮೈಲಿ) ಇರಬೇಕು. ಈ ಪ್ರಯಾಣಗಳ ವೇಳೆ ಮರಳುಗಾಡು ಜನರ ಸಾಮನ್ಯ ಜೀವನ; ಒಂಟೆಗಳ ಸ್ವಭಾವಗಳ ಬಗ್ಗೆ ಅಧ್ಯಯನ ಮಾಡಿ ತನ್ನ ಗಮನಿಕೆಗಳ ಬಗ್ಗೆ ದಾಖಲೆ ಪುಸ್ತಕ ತಯಾರಿಸಬೇಕು. ಈ ಪ್ರಯಾಣಗಳ ಸಮಯದಲ್ಲಿ ಕನಿಷ್ಠ 2 ರಾತ್ರಿಗಳನ್ನು ಓಯಸಿಸ್ ಅಥವಾ ಗ್ರಾಮಗಳಲ್ಲಿ ಕಳೆದಿರಬೇಕು.

   iv) **ಜನ ಜೀವನ** : ಪ್ರಚಲಿತವಿರುವ ಒಂಟೆ ಸವಾರನ ಜನಪದಗೀತೆ ಯನ್ನು ಹಾಡಬೇಕು. ಅಥವಾ ಆಲ್‌ಗೋಜೆ (Algoje) ಪಾತ್ರ ವಹಿಸಬೇಕು. ಅಥವಾ ಮರಳುಗಾಡು ಪ್ರದೇಶದ ಯಾವುದಾದ ರೊಂದು ಜನಪದ ನೃತ್ಯದಲ್ಲಿ ಭಾಗವಹಿಸಬೇಕು.

**16. ಶಿಬಿರ ವಾಸಿ (Camper)**



1. ಒಂದು ವಾರದ ಶಿಬಿರಕ್ಕೆ ಅಗತ್ಯವಿರುವ ಸಾಮಾನ್ಯ ವೈಯಕ್ತಿಕ ವಸ್ತುಗಳ ಬಗ್ಗೆ ತಿಳಿದಿರಬೇಕು. ವಾರಾಂತ್ಯ ಚಾರಣಕ್ಕೆ ಅಗತ್ಯವಿರುವ ವೈಯಕ್ತಿಕ ವಸ್ತುಗಳು, ವಾರಾಂತ್ಯ ಪಟಾಲಂ ಶಿಬಿರ, ಅಥವಾ ಸಮುದ್ರ ಪರ್ಯಟನೆ (ಏಳು ಮಂದಿಗೆ) ಸಲಕರಣೆ –ಗಳು ಹಾಗೂ ಅವಶ್ಯವಿರುವ ಆಹಾರ ಸಾಮಗ್ರಿಗಳ ಬಗ್ಗೆ ತಿಳಿದಿರಬೇಕು.

2. ಪಟಾಲಂ ಅಥವಾ ದಳಗಳ ಶಿಬಿರಕ್ಕೆ ಸ್ಥಳವನ್ನು ಆಯ್ಕೆ ಮಾಡುವಾಗ ಗಮನಿಸಬೇಕಾದ ಮುಖ್ಯ ಅಂಶಗಳನ್ನು ತಿಳಿದಿರಬೇಕು. ಮತ್ತು ಶಿಬಿರದ ಕಚ್ಚಾ ನಕ್ಷೆಯನ್ನು ತಯಾರಿಸಿ ಅದರಲ್ಲಿ ಗುಡಾರಗಳು, ಅಡಿಗೆ ಮನೆ, ಪಾಕೀಜು ವ್ಯವಸ್ಥೆ ಇತ್ಯಾದಿಗಳನ್ನು ಗುರುತಿಸಬೇಕು.

ಅಥವಾ

ಹುಟ್ಟು ಹಾಕುವ ದೋಣಿ ಅಥವಾ ತೇಲುವ ನಾವೆ ಅಥವಾ ಸಮುದ್ರ ವನ್ನು ಹಾಯುವ ಹಡಗು ಇವುಗಳನ್ನು ಲಂಗರು ಹಾಕುವ ಸಲುವಾಗಿ ಸ್ಥಳ/ರೇವುಗಳನ್ನು ಆಯ್ಕೆ ಮಾಡುವುದು ತಿಳಿದಿರಬೇಕು.

3. ಸಾದರಪಡಿಸಬೇಕಾದ ಅಂಶಗಳು :

ಅ) ಕೊಡಲಿಯನ್ನು ಉಪಯೋಗಿಸುವ ಮತ್ತು ಅದನ್ನು ಸುಸ್ಥಿತಿಯಲ್ಲಿಡಲು ಎಚ್ಚರಿಕೆ ವಹಿಸುವ ಬಗ್ಗೆ ತಿಳಿದಿರಬೇಕು.

ಆ) ಪ್ರಥಮ ಸೋಪಾನ ಹಾಗೂ ದ್ವಿತೀಯ ಸೋಪಾನದ ಪರೀಕ್ಷಾಂಶಗಳಲ್ಲಿ ಬರುವ ಗಂಟುಗಳನ್ನು ಹಾಕುವುದು ಮತ್ತು ಉಪಯೋಗಿಸುವುದರ ಜೊತೆಗೆ ಜಾರು ಸಮಗಂಟು (Slip reef) ಇಮ್ಮೂಲೆ ಗಂಟು (Double sheet bend) ಸುತ್ತು ಕುಣಿಕೆ ಗಂಟು (Bowline on bight) ಏಣಿ ಗಂಟು (Manharness knot) ಇವುಗಳನ್ನು ಹಾಕುವುದು ಮತ್ತು ಉಪಯೋಗಿಸಲು ತಿಳಿದಿರಬೇಕು.

4. 40. 8 ಕೆ.ಜಿ. (90 ಪೌಂಡ್) ಮತ್ತು 81.6 ಕೆ.ಜಿ. (180 ಪೌಂಡ್) ತೂಕದ ಗುಡಾರ ಹಾಕುವುದು, ತೆಗೆಯುವುದು, ಸುತ್ತುವುದು, ತೆಗೆದಿಡುವುದು ತಿಳಿದಿರಬೇಕು. ಮತ್ತು ಗುಡಾರಗಳ ಸಣ್ಣಪುಟ್ಟ ದುರಸ್ತಿ ಮಾಡಲು ತಿಳಿದಿರಬೇಕು. ಈ ಅಂಶಗಳನ್ನು ಸಾದರ ಪಡಿಸಬೇಕು. ಸ್ಥಳೀಯವಾಗಿ ದೊರಕುವ ವಸ್ತುಗಳನ್ನು ಉಪಯೋಗಿಸಿಕೊಂಡು ಒಂದು ಗುಡಿಸಲನ್ನು ಹಾಕಬೇಕು. ಈ ಗುಡಿಸಲಿನಲ್ಲಿ ತನ್ನ ಪಟಾಲಂನ ಎಲ್ಲರಿಗೂ ಸಾಕಷ್ಟು ಸ್ಥಳಾವಕಾಶವಿರಬೇಕು.

5. ಶಿಬಿರದ ಅಡಿಗೆ ಕೆಲಸದ ಬಗ್ಗೆ ಸಾಕಷ್ಟು ತಿಳುವಳಿಕೆ ಇರಬೇಕು. ಇದನ್ನು ಸಾದರ ಪಡಿಸಬೇಕು. ಆಹಾರವನ್ನು ಶೇಖರಿಸುವ ಬಗ್ಗೆ, ನೀರನ್ನು ಶುದ್ಧೀಕರಿಸುವ ಬಗ್ಗೆ, ಕಸ ಕಡ್ಡಿಗಳನ್ನು ವಿಲೇವಾರಿ ಮಾಡುವ ಬಗ್ಗೆ ಅನುಸರಿಸಬೇಕಾದ ಸೂಕ್ತ ಕ್ರಮಗಳನ್ನು ತಿಳಿದಿರಬೇಕು.

6. ಗುಡಾರದ ಅಥವಾ ತಾನೇ ತಾತ್ಕಾಲಿಕವಾಗಿ ನಿರ್ಮಿಸಿದ ಗುಡಿಸಲಿನಲ್ಲಿ ಅಥವಾ ಹಡಗಿನಲ್ಲಿ ದೋಣಿಯಲ್ಲಿ ದಳದವರೊಡನೆ ಅಥವಾ ತನ್ನ ಪಟಾಲಂ ಜೊತೆ 12 ರಾತ್ರಿಗಳಿಗೆ ಕಡಿಮೆಯಿಲ್ಲದಂತೆ ಹಾಗೂ ಒಂಟಿಯಾಗಿ ಅಥವಾ ಮತ್ತೊಬ್ಬ ಸ್ಕೌಟ್‌ನೊಂದಿಗೆ ಕನಿಷ್ಠ 3 ರಾತ್ರಿಗಳು ಶಿಬಿರ ಹೂಡಿರಬೇಕು. ಈ ರೀತಿ ಶಿಬಿರವು ಅನುಕ್ರಮವಲ್ಲದೆ ಇದ್ದರೂ ನಡೆಯುತ್ತದೆ.

### 17. ಶಿಬಿರ ಪಾಲಕ (Campworden)



1. ನಾಲ್ಕು ಬೇರೆ ಬೇರೆ ಸಂದರ್ಭಗಳಲ್ಲಿ ಕನಿಷ್ಠ 10 ರಾತ್ರಿಗಳು ಶಿಬಿರ ಹೂಡಿರಬೇಕು.
2. ಸ್ಕೌಟುಗಳ ಬೇಸಿಗೆ ಶಿಬಿರದಲ್ಲಿ ಪೂರ್ಣ ಕಾಲದ ಉಗ್ರಾಣಾಧಿಕಾರಿಯಾಗಿ ಸಹಕರಿಸಿರ ಬೇಕು.
3. ಮೂರು ದಿನಗಳ ಕಾಲ ಸ್ಥಾಯೀ ಶಿಬಿರ ಪಾಲಕರಿಗೆ ಅವರ ಕರ್ತವ್ಯ ಪಾಲನೆಯಲ್ಲಿ ಸಹಾಯ ಮಾಡಿರಬೇಕು.
4. ಗುಡಾರ ಕೌಶಲದ ಬಗ್ಗೆ ತಿಳಿದಿರಬೇಕು. ಶಿಬಿರದ ಮತ್ತು ತರಬೇತಿಯ ಉಪಕರಣಗಳ ಸುರಕ್ಷತೆಯ ಬಗ್ಗೆ ಅರಿವಿರಬೇಕು.
5. ಶಿಬಿರ ಗ್ರಂಥಾಲಯವನ್ನು ನಿರ್ವಹಿಸಲು ಸಮರ್ಥನಿರಬೇಕು.
6. ಶಿಬಿರ ನೈರ್ಮಲ್ಯದ ಬಗ್ಗೆ ಉತ್ತಮ ಜ್ಞಾನ ಹೊಂದಿರಬೇಕು.
7. ಪ್ರಥಮ ಚಿಕಿತ್ಸೆಯ ಬಗ್ಗೆ ಸಾಕಷ್ಟು ಮಾಹಿತಿ ಹೊಂದಿರಬೇಕು ಹಾಗೂ ತುರ್ತು ಸಂದರ್ಭಗಳಲ್ಲಿ ಸಹಾಯ ಪಡೆಯುವ ರೀತಿಗಳನ್ನು ತಿಳಿದಿರಬೇಕು.
8. ಶಿಬಿರವಾಸಿಗಳಿಗೆ ಬೇಕಾಗುವ ಅಡಿಗೆ ಪದಾರ್ಥಗಳ ಅಂದಾಜು ಮಾಡುವುದು, ಅವುಗಳ ವಿಕ್ರಯ ಮತ್ತು ವಿತರಣೆ ಹಾಗೂ ತಯಾರಾದ ಆಹಾರವನ್ನು ಹಂಚುವ ಬಗ್ಗೆ ತಿಳಿದಿರಬೇಕು.

### 18. ಅರ್ಬುಧ ರೋಗ (Cancer Awareness) ಜಾಗೃತಿ

1. ನಿತ್ಯ ಜೀವನದಲ್ಲಿ ರೋಗಕ್ಕೆ ಕಾರಣವಾದ ವಸ್ತುಗಳನ್ನು ಗುರುತಿಸಬೇಕು. (ಅರ್ಬುದರೋಗದ ಉತ್ಪತ್ತಿಗೆ ಕಾರಣವಾದ ಯಾವುದೇ (Carcinogens) ವಸ್ತುವನ್ನು ಕಾರ್ಸಿನೋಜನ್ ಎನ್ನುತ್ತಾರೆ.)

2. ಅರ್ಬುದ ರೋಗಿಗಳನ್ನು ಉಪಚರಿಸುವ ಹಾಗೂ ರೋಗದ ತೀವ್ರತೆಯನ್ನು ಕಡಿಮೆ ಮಾಡುವ ಪ್ರಮುಖ ಅಂಶಗಳನ್ನು ತಿಳಿದಿರಬೇಕು. (ರೋಗದ ಕಾರಣವನ್ನು ತೆಗೆಯದೆ, ತೀವ್ರತೆಯನ್ನು ಕಡಿಮೆಮಾಡುವುದನ್ನು ಪ್ಯಾಲ್ಲಿಯೇಟೆಡ್ (Palliated) ಎನ್ನುವರು).

3. ಈ ಕೆಳಗಿನ ಅಂಶಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ಯೋಜನೆ ರೂಪಿಸಬೇಕು.

   ಅ. ಅರ್ಬುದ ರೋಗದ ಏಳು ಲಕ್ಷಣಗಳು ಮತ್ತು ಸೂಚಕಗಳು.

   ಆ. ಮುಂಚಿತವಾಗಿ ಗುರುತಿಸಲ್ಪಟ್ಟರೆ ಈ ರೋಗವನ್ನು ಗುಣಪಡಿಸಬಹುದು.

   ಇ. ಅರ್ಬುದ ರೋಗವನ್ನು ಉಂಟುಮಾಡುವ ಅಪಾಯಕಾರಿ ಅಭ್ಯಾಸಗಳನ್ನು ನಿವಾರಿಸುವುದು.

   ಈ. ಈ ರೋಗದ ಬಗೆಗಿನ ಮಿಥ್ಯೆಗಳನ್ನು ದೂರ ಮಾಡುವುದು.

**19. ಬಡಗಿ (Carpenter)**

1. ಸ್ಕ್ರೂ ಮೊಳಗೆ ಅಥವಾ ಮರಕ್ಕೆ ಹಾನಿಯಾಗದಂತೆ 38. ಮಿ.ಮೀ. (1.5 ಅಂ.) ಆಳಕ್ಕೆ ಸ್ಕ್ರೂ ಮೊಳೆ ಸೇರಿಸಬೇಕು.



2. 38 ಮಿ.ಮೀ. (1.5 ಅಂ.) ಉದ್ದ ಮೊಳೆಯನ್ನು ಪ್ಯಾಕಿಂಗ್ ಪೆಟ್ಟಿಗೆಯ ಮುಚ್ಚಳಕ್ಕೆ ನೇರವಾಗಿ ಬಡಿಯಬೇಕು ಅಥವಾ ಒಂದು ಪೆಟ್ಟಿಗೆ ತಯಾರಿಸಬೇಕು.

3. ಸಾಮಾನ್ಯ ಗರಗಸವನ್ನು ಬಳಸಿ 25 ಮಿ.ಮೀ. (1 ಅಂ.) ದಪ್ಪದ ಹಲಗೆಯಲ್ಲಿ 60 ಸೆಂ.ಮೀ. (2 ಅಡಿ) ಉದ್ದಕ್ಕೆ ಕೊಯ್ಯಬೇಕು. ಕೊಯ್ಯುವಾಗ ರೇಖೆಯಿಂದ 1/33 ಮಿ.ಮೀ. (1/16 ಅಂ.)ಗಿಂತ ಹೆಚ್ಚು ಸರಿಯದಂತೆ ಇರಬೇಕು.

4. ಉಳಿಯನ್ನು ಮತ್ತು ಹತ್ತರಿಯ ಉಳಿಯನ್ನು ಹರಿತಗೊಳಿಸಬೇಕು, ಮರದ ಕೂರು ತುಂಡುಗಳನ್ನು ಕೂಡಿಸುವಂತೆ ವೆಜ್ಜ (Mortise) ಮಾಡಬೇಕು.

5. ಎರಡು ಮರದ ಹಲಗೆ ತುಂಡುಗಳನ್ನು ಒಂದರೊಳಗೊಂದು ಬರುವಂತೆ ಕನಿಷ್ಠ 5 ವೆಜ್ಜಗಳನ್ನು (Dovetail) ಮಾಡಬೇಕು. ಅಥವಾ ಸರಿಯದ ರೀತಿಯಲ್ಲಿ ಜೋಡಿಸಿದ ಕಾಲುಮಣೆ (Stool)/ಕುರ್ಚಿ/ಇತರೆ ಯಾವುದೇ ರೀತಿಯ ಜೋಡಿಸಿದ ಪೀಠೋಪಕರಣವನ್ನು (Firniture) ತಯಾರಿಸಬೇಕು.

6. ಸ್ಥಳೀಯವಾಗಿ ಬಳಸುವ ಮರಗಳ ಮೂಲ ತಿಳುವಳಿಕೆ ಹೊಂದಿರಬೇಕು ಹಾಗೂ ಪ್ರತಿಯೊಂದರ ಲಕ್ಷಣ ಮತ್ತು ಉಪಯೋಗಗಳನ್ನು ತಿಳಿದಿರಬೇಕು.

7. ತನ್ನ ಶಾಲೆಯ/ಬೇರೆ ಯಾವುದೇ ಶಾಲೆಯ ಪೀಠೋಪಕರಣಗಳನ್ನು ದುರಸ್ತಿ ಮಾಡಲು ಮುಖ್ಯ ಶಿಕ್ಷಕರಿಗೆ ನೆರವಾಗಬೇಕು.

**20. ನಾಗರಿಕ (Citizen)**



1. ಮತದಾರನ ಕನಿಷ್ಠ ಅರ್ಹತೆ ತಿಳಿದಿರಬೇಕು ಹಾಗೂ ತನ್ನ ಕುಟುಂಬದಲ್ಲಿ ಮತ್ತು ನೆರೆಯುವವರಲ್ಲಿ ಇರುವ ಪ್ರತಿಯೊಬ್ಬ ಮತದಾರನೂ ಮತ ಚಲಾಯಿಸುವಂತೆ ಪ್ರೇರೇಪಿಸಬೇಕು.
2. ಈ ಕೆಳಕಂಡ ಅಂಶಗಳ ಬಗ್ಗೆ ತಿಳಿದಿರಬೇಕು.
   i) ಭಾರತ ಸರ್ಕಾರದ ರಾಷ್ಟ್ರಪತಿಗಳು ಮತ್ತು ಉಪರಾಷ್ಟ್ರಪತಿಗಳು ಹಾಗೂ ರಾಜ್ಯಗಳ ರಾಜ್ಯಪಾಲರುಗಳ ಅಧಿಕಾರ ಮತ್ತು ಕರ್ತವ್ಯಗಳು.
   ii) ಲೋಕಸಭೆ, ರಾಜ್ಯಸಭೆ, ವಿಧಾನಸಭೆ ಮತ್ತು ವಿಧಾನ ಪರಿಷತ್ತುಗಳ ಕಾರ್ಯವ್ಯಾಪ್ತಿ.
   iii) ತನ್ನ ಪ್ರದೇಶಕ್ಕೆ ಸಂಬಂಧಿಸಿದಂತೆ ಸ್ಥಳೀಯ ಸಂಸ್ಥೆಗಳಾದ (ಪುರ ಸಭೆ, ಜಿಲ್ಲಾ ಪಂಚಾಯತ್, ದಂಡು ಪ್ರದೇಶ ಪಂಚಾಯತ್) ಕಾರ್ಯ ನಿರ್ವಹಣೆ.
3. ರಾಜ್ಯ ಮತ್ತು ಸ್ಥಳೀಯ ಆಡಳಿತಾಂಗದ ಕಾರ್ಯ ನಿರ್ವಹಣೆಯ ಬಗ್ಗೆ ತಿಳಿದಿರಬೇಕು.
4. ದೇಶದ ನ್ಯಾಯಾಂಗ ವ್ಯವಸ್ಥೆಯ ಬಗ್ಗೆ ತಿಳಿದಿರಬೇಕು.
5. ಶಾಲೆಯ ದಳದ 'ಅಣಕು ಲೊಕಸಭೆ'ಯಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು.

**21. ಆರೋಹಿ (Climber)**

1. 14 ವರ್ಷ ತುಂಬಿದವನಾಗಿರಬೇಕು.
2. ಕನಿಷ್ಠ 2 ಕಿ.ಮೀ. ಸುತ್ತಳತೆಯ ಪರ್ವತ ಪ್ರದೇಶದ ಬಗ್ಗೆ ತಿಳಿದಿರಬೇಕು. ತುರ್ತು ಸಂದರ್ಭದಲ್ಲಿ ಹತ್ತಿರದಲ್ಲಿ ಲಭ್ಯವಿರುವ ದೂರವಾಣಿ ಹಾಗೂ ಕರೆಯಬಹುದಾದ ವೈದ್ಯರನ್ನು ತಿಳಿದಿರಬೇಕು.
3. ದಿಕ್ಸೂಚಿ ಮತ್ತು ಭಾರತ ಭೂಮಾಪನದವರ ನಕಾಶೆ (ಅಥವಾ ಸ್ಥಳೀಯ ತತ್ಸಮಾನವಾದ ನಕ್ಷೆ) ಉಪಯೋಗಿಸಿಕೊಂಡು ಸೂಚಿತ ಸ್ಥಳಕ್ಕೆ (ಪರ್ವತ ಪ್ರದೇಶದಲ್ಲಿ) ದಾರಿಯನ್ನು ಕಂಡು ಹಿಡಿಯಬೇಕು ಮತ್ತು ಪರ್ವತಾರೋಹಣದ ಸಾಮರ್ಥ್ಯವನ್ನು ತೋರಿಸಬೇಕು.

4. ಮೂಳೆ ಮುರಿತ, ಕೀಲು ತಪ್ಪುವುದು, ಜಜ್ಜುಗಾಯ, ಮೆದುಳಿನ ಆಘಾತ, ಗಾಬರಿಗಳಿಗೆ ಪ್ರಥಮ ಚಿಕಿತ್ಸೆ ನೀಡುವುದನ್ನು ತಿಳಿದಿರಬೇಕು, ಹಾಗು ರೋಗಿಯನ್ನು ಸಾಗಿಸುವ ವಿಧಾನವನ್ನು ತಿಳಿದಿರಬೇಕು.



5. ಕನಿಷ್ಠ 1200 ಮೀ. ಎತ್ತರವಿರುವ ಪರ್ವತ ಪ್ರದೇಶದಲ್ಲಿ ಕನಿಷ್ಠ 3 ದಿನಗಳ ಚಾರಣವನ್ನು ಕೈಗೊಳ್ಳಬೇಕು. (ಅನುಕ್ರಮವಾಗಿರುವ ಅವಶ್ಯಕತೆಯಿಲ್ಲ).

6. ಅಧಿಕೃತ ಶಿಲಾರೋಹಣ ಶಿಬಿರದಲ್ಲಿ ಭಾಗವಹಿಸಿದ ಬಗ್ಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

## 22. ನಾಗರಿಕ ರಕ್ಷಣೆ (Civil Defence)

1. ತನ್ನ ಮೊಹಲ್ಲಾದಲ್ಲಿ ಅಥವಾ ಸ್ಥಳದಲ್ಲಿ, ತನ್ನ ಮನೆಯಿಂದ, ಶಾಲೆಯಿಂದ, ಅಥವಾ ಕಾರ್ಯ ಸ್ಥಳದಿಂದ ಒಂದು ಕಿ.ಮೀ. ತ್ರಿಜ್ಯದ ಅಳತೆಯಲ್ಲಿರುವ ನಾಗರಿಕ ರಕ್ಷಣಾ ಸಂಸ್ಥೆಯು ನೀಡುವ ಸೇವೆಯ ವಿವರ ತಿಳಿದಿರಬೇಕು. ಪಾಲಕರ (ವಾರ್ಡನ್) ಹೆಸರು, ಪಾಲಕರ ಸ್ಥಳಗಳು, ಪ್ರಥಮ ಚಿಕಿತ್ಸಾ ಸ್ಥಳ, ಔಷಧಾಲಯಗಳು, ಆಸ್ಪತ್ರೆಗಳು, ಮತ್ತು ಲಭ್ಯವಿರುವ ವಾಯು ಧಾಳಿಯ ಎಚ್ಚರಿಕೆಯ, ಇತರೆ ಸೇವೆಗಳ ಬಗ್ಗೆ ವಿವರಗಳು ತಿಳಿದಿರಬೇಕು.




2. ತುರ್ತುಸ್ಥಿತಿಯಲ್ಲಿ ವರದಿಯ ಪತ್ರವನ್ನು ಸರಿಯಾಗಿ ತುಂಬುವುದು, ಮತ್ತು ಲಿಖಿತ ವರದಿಯನ್ನು ಪಾಲಕರಿಗೆ ಕಳುಹಿಸುವುದನ್ನು ತಿಳಿದಿರಬೇಕು.

3. ವಾಯುಧಾಳಿ ಈ ರೀತಿಯ ಇತರ ತುರ್ತು ಸಂದರ್ಭಗಳಲ್ಲಿ ಉಂಟಾಗುವ ಗಾಯಾಳುಗಳಿಗೆ ಪ್ರಥಮ ಚಿಕಿತ್ಸೆ ನೀಡುವ ಮತ್ತು ರಕ್ಷಿಸುವ ವಿಧಾನಗಳನ್ನು ತಿಳಿದಿರಬೇಕು.

4. ಅಗ್ನಿಶಮನ ಮಾಡುವ ಕನಿಷ್ಠ ಎರಡು ವಿಧಾನಗಳ ತಿಳುವಳಿಕೆ ಇರಬೇಕು.

5. ತನ್ನ ಸ್ಥಳದ ಅಥವ ಮೊಹಲ್ಲಾದ ನಾಗರಿಕ ರಕ್ಷಣೆ ಸಂಸ್ಥೆಯಲ್ಲಿ ನೋಂದಣಿ ಆಗಿರುವ ಬಗ್ಗೆ ಪ್ರಮಾಣ ಪತ್ರ ಪಡೆದಿರಬೇಕು. ಹಾಗೂ ಈ ಕೆಳಕಂಡ ನಾಗರಿಕ ರಕ್ಷಣಾ ಸೇವೆಗಳಲ್ಲಿ ಒಂದರಲ್ಲಿ ತರಬೇತಿ ಪಡೆದಿರುವ ಬಗ್ಗೆ ಪ್ರಮಾಣ ಪತ್ರವನ್ನು ಪ್ರಸ್ತುತ ಪಡಿಸಬೇಕು.

ಅ) ಅಗ್ನಿಶಾಮಕ ದಳ ಆ) ಪ್ರಥಮಚಿಕಿತ್ಸೆ ತಂಡ
ಇ) ಸಂದೇಶ ವಾಹಕ ಸೇವೆ ಈ) ದೂರ ಸಂಪರ್ಕ

6. ಕುಸಿದು ಬಿದ್ದ ಮನೆಗಳಿಂದ ವ್ಯಕ್ತಿಗಳನ್ನು ರಕ್ಷಿಸುವ ವಿಧಾನಗಳನ್ನು ತಿಳಿದಿರಬೇಕು

**23. ಸಮುದಾಯ ಗಾಯನ (Community Singing)**



1. ತನ್ನ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಗಳಲ್ಲಿ ಎರಡು ಹಾಡುಗಳನ್ನು ಹಾಡಬೇಕು.
2. ಮೇಲಿನ ಎರಡು ಹಾಡುಗಳ ಅರ್ಥವನ್ನು ಹೇಳಬೇಕು (ಪ್ರಾದೇಶಿಕ /ಮಾತೃಭಾಷೆ).
3. ಪ್ರಾದೇಶಿಕ / ಮಾತೃಭಾಷೆಯನ್ನು ಹೊರತು-ಪಡಿಸಿ, ಮತ್ತೊಂದು ಭಾಷೆಯಲ್ಲಿ, ಸರಿಯಾದ ರಾಗ ಹಾಗೂ ಉಚ್ಚಾರದೊಡನೆ, ಒಂದು ಹಾಡನ್ನು ಹಾಡಬೇಕು.
4. ತನ್ನ ಪಟಾಲಂ / ಗುಂಪಿಗೆ ಒಂದು ಹಾಡನ್ನು ಕಲಿಸಿಕೊಡಬೇಕು ಹಾಗೂ ಗುಂಪಿನೊಡನೆ, ಆ ಹಾಡನ್ನು ಮೇಳಗಳಂತಹ ಕಾರ್ಯಕ್ರಮದಲ್ಲಿ / ಶಿಬಿರಾಗ್ನಿಯಲ್ಲಿ ಹಾಡಬೇಕು.

**24. ಸಮುದಾಯ ಕಾರ್ಯಕರ್ತ (Community Worker)**



1. ಸಮುದಾಯ ಅಭಿವೃದ್ಧಿ ಪ್ರಕ್ರಿಯೆ ತಿಳಿದಿರಬೇಕು.
2. ತನ್ನ ಸುತ್ತಲಿನ, ಕನಿಷ್ಠ 12 ಮಂದಿ ಕಿರಿಯ ಬಾಲಕರನ್ನು ಮನವೊಲಿಸಿ ಅವರು ಚಳವಳಿಗೆ ಸೇರುವಂತೆ ಹುರಿದುಂಬಿಸಬೇಕು.
3. ಸಮುದಾಯ ಹಾಗೂ ಸಮುದಾಯ ಸಂಪನ್ಮೂಲಗಳ (ಉದಾ: ಬ್ಯಾಂಕುಗಳು, ಆಸ್ಪತ್ರೆಗಳು, ತಜ್ಞರು ಇತ್ಯಾದಿ) ನಡುವೆ ಸಂಪರ್ಕ ವ್ಯಕ್ತಿಯಾಗಬೇಕು.
4. ಶುದ್ಧನೀರು, ಶಾಲಾಕಟ್ಟಡ, ತರಕಾರಿ ಮಾರಾಟ ಸ್ಥಳ ಮುಂತಾದ ಮೂಲಭೂತ ಅವಶ್ಯಕತೆಗಳ ಪೈಕಿ ಕನಿಷ್ಠ ಎರಡರ ಸುಧಾರಣೆಗೆ ಅಥವಾ ಪರಿಹಾರಕ್ಕೆ ಯೋಜನೆ ರೂಪಿಸಲು ಸ್ಥಳೀಯ ಜನರೊಡನೆ ಸಹಕರಿಸ ಬೇಕು.
5. ತನ್ನ ಗ್ರಾಮ / ಮೊಹಲ್ಲಾ / ಕೊಳಚೆ ಪ್ರದೇಶದಲ್ಲಿ ರೋಗ ನಿರೋಧಕ (immunisation) ಶಿಬಿರದಲ್ಲಿ ಸಹಕರಿಸಬೇಕು.

## 25. ಗಣಕಯಂತ್ರ ಜಾಗೃತಿ (Computer Awareness)

1. ಕಂಪ್ಯೂಟರ್‌ನ ಸಂಕ್ಷಿಪ್ತ ಇತಿಹಾಸ ಹಾಗೂ ಇತ್ತೀಚೆಗಿನ ಬೆಳವಣಿಗೆಗಳ ಬಗ್ಗೆ ಅರಿವಿರಬೇಕು.



2. ಕಂಪ್ಯೂಟರ್ ಸಲಕರಣೆಗಳು ಹಾಗೂ ಅದರ ಭಾಗಗಳ ಉಪಯೋಗದ ಬಗ್ಗೆ ಪಳಗಿರಬೇಕು.
3. ಸ್ಕೌಟ್ / ಗೈಡ್ ಚಟುವಟಿಕೆಗಳಲ್ಲಿ ಕಂಪ್ಯೂಟರ್–ಗಳನ್ನು ಉತ್ತಮರೀತಿಯಲ್ಲಿ ಬಳಸುವ ಬಗ್ಗೆ ತಿಳಿದಿರಬೇಕು.
4. ಸಾಮಾನ್ಯವಾಗಿ ಬಳಸುವ ಪ್ಯಾಕೇಜ್‌ಗಳ ಬಗ್ಗೆ ಅರಿವಿರಬೇಕು.
5. ಈ ಕೆಳಗಿನವುಗಳನ್ನು ಮಾಡಬೇಕು.
   ಅ) ಡಿ.ವಿ.ಡಿ./ ಪೆನ್ ಡ್ರೈವ್ ಮತ್ತು ಫ್ಲಾಪಿ ಅಥವಾ ಹಾರ್ಡ್‌ಡಿಸ್ಕನ್ನು ಕಂಪ್ಯೂಟರ್‌ನಲ್ಲಿ ಬಳಸುವುದು.
   ಆ) ಕಂಪ್ಯೂಟರ್‌ನ ಬೂಟಿಂಗ್ ಮತ್ತು ಷಟ್‌ಡೌನ್ ಮಾಡುವುದು.

## 26. ಬಾಣಸಿಗ (Cook)

1. ಸಮತೋಲನ ಆಹಾರದ ಮಿಶ್ರಣ ಪದಾರ್ಥ–ಗಳನ್ನು ಅರಿತಿರಬೇಕು.



2. ದಿನಸಿ ಹಾಗೂ ತರಕಾರಿಗಳನ್ನು ಕೊಳ್ಳಲು ತಿಳಿದಿರಬೇಕು. ಕನಿಷ್ಠ ಆರು ಸ್ಕೌಟ್‌ಗಳ ಒಂದು ಪೆಟ್ರೋಲಿನ ಒಂದು ವಾರದ ಶಿಬಿರಕ್ಕೆ ಅವಶ್ಯಕವಿರುವ ದಿನಸಿ, ತರಕಾರಿ ಪಟ್ಟಿ (ಉತ್ತಮ ಪೋಷಕಾಂಶಗಳಿಂದ ಕೂಡಿದ ಬೆಲೆಯ ಸಹಿತ) ತಯಾರಿಸಬೇಕು.
3. ಅಡಿಗೆ ಸ್ಥಳವನ್ನು ಸರಿಯಾಗಿ ಅಣಿಗೊಳಿಸಬೇಕು. ಮಗನ್ ಚೂಲಾ, ಹರಿಯೊಲೆ ಮುಂತಾದ ಒಲೆಗಳಲ್ಲಿ ಬೆಂಕಿಯನ್ನು ಹೊತ್ತಿಸಬೇಕು. ಪರೀಕ್ಷಕರು ಸೂಚಿಸಿದ ರೀತಿಯಲ್ಲಿ ಐದು ಸ್ಥಳೀಯ ತಿನಿಸುಗಳು ಮತ್ತು ಎರಡು ಪಾನೀಯಗಳನ್ನು ಆ ಒಲೆಗಳಲ್ಲಿ ತಯಾರಿಸಬೇಕು. ಪಟ್ಟಣ ಪ್ರದೇಶಗಳಲ್ಲಿ ಗ್ಯಾಸ್ ಒಲೆ ಅಥವಾ ಇತರೆ ಸ್ಟೌವ್ ಬಳಸಬಹುದು. ಐದು ತಿನಿಸುಗಳ ಪೈಕಿ ಎರಡನ್ನು ಪಾತ್ರೆಗಳಿಲ್ಲದೆ ತಯಾರಿಸಬೇಕು.
4. ಸೂಕ್ತ ರೀತಿಯಲ್ಲಿ ಆಹಾರವನ್ನು ವಿತರಿಸಬೇಕು.
5. ಆರೋಗ್ಯಕರ ರೀತಿಯಲ್ಲಿ ಆಹಾರ, ಸಾಮಗ್ರಿಗಳನ್ನು ಸಂಗ್ರಹಣೆ ಮಾಡುವ ವಿಧಾನವನ್ನು ತಿಳಿದಿರಬೇಕು.

## 27. ಸೈಕಲ್ ತಜ್ಞ (Cyclist)



1. ದೀಪ, ಗಂಟೆ ಅಥವಾ ಹಾರ್ನ್, ಹಿಂಬದಿಯ ದೀಪ, ಮತ್ತು ಪಂಪ್ ಇವುಗಳನ್ನು ಒಳಗೊಂಡ, ಸುಸ್ಥಿತಿಯಲ್ಲಿರುವ, ಸೈಕಲ್ ಅಥವಾ ಮೋಟಾರ್ ಸೈಕಲ್ ಅನ್ನು ಕನಿಷ್ಠ ಆರು ತಿಂಗಳಕಾಲ ತಾನು ಹೊಂದಿರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸಬೇಕು. ತುರ್ತುಸ್ಥಿತಿಯಲ್ಲಿ ಕರೆ ಬಂದ ಕೂಡಲೇ ಅದನ್ನು "ದೇಶದ ಸೇವೆಗಾಗಿ ಬಳಸಲು ಒಪ್ಪಿರುತ್ತೇನೆ ಹಾಗೂ ಬಳಸುತ್ತೇನೆ" ಎಂದು ಪ್ರಮಾಣ ಪತ್ರ ಸಲ್ಲಿಸಬೇಕು.
2. ತನ್ನ ವಾಹನವನ್ನು ತೃಪ್ತಿಕರವಾಗಿ ಸವಾರಿ ಮಾಡಬೇಕು. ಅದನ್ನು ಓಡುವ ಸ್ಥಿತಿಯಲ್ಲಿಟ್ಟಿರಬೇಕು. ಸೈಕಲ್ ಆದರೆ, ಅದನ್ನು ಎರಡೂ ಬದಿಯಿಂದ ಏರಲು ಹಾಗೂ ಇಳಿಯಲು ಸಮರ್ಥನಿರಬೇಕು.
3. ಪರೀಕ್ಷಕರಿಗೆ ಒಪ್ಪಿಗೆಯಾಗುವ ರೀತಿಯಲ್ಲಿ, ಪಂಕ್ಚರ್ ಹಾಕಬೇಕು. ಬ್ರೇಕ್ ಮತ್ತು ಚಕ್ರವನ್ನು ತೆಗೆದು ಬದಲಿಸಬೇಕು ಮತ್ತು ತನ್ನ ವಾಹನದ ಯಾವುದೇ ಭಾಗವನ್ನು ಪರೀಕ್ಷಕರಿಗೆ ಒಪ್ಪಿಗೆ ಆಗುವ ರೀತಿಯಲ್ಲಿ ಸರಿಪಡಿಸಬೇಕು.
4. ಹೆದ್ದಾರಿಯ ನಿಯಮಗಳು, ಸಂಚಾರಿ ಸಂಕೇತಗಳು, ದೀಪ ಹಚ್ಚುವ ನಿಖರ ಸಮಯ (ಅಂದರೆ ಸೂರ್ಯಾಸ್ತವಾದ ಬಳಿಕ) ತಿಳಿದಿರಬೇಕು. ರಸ್ತೆಗಳಿಗೆ ಸಂಖ್ಯೆಗಳನ್ನು ನೀಡುವ ಕ್ರಮವನ್ನು ತಿಳಿದಿರಬೇಕು ಮತ್ತು ರಸ್ತೆ ನಕ್ಷೆಯನ್ನು ಓದಲು ಸಮರ್ಥನಿರಬೇಕು.
5. ಕನಿಷ್ಠ ಒಂದು ಗಂಟೆಯ ಸವಾರಿಯ ನಂತರ ಮೌಖಿಕ ಸಂದೇಶವನ್ನು ತಪ್ಪಿಲ್ಲದೆ ಪುನರುಚ್ಚರಿಸಬೇಕು.
6. ಹಿಂದಿನ 6 ತಿಂಗಳುಗಳಲ್ಲಿ ತನ್ನ ವಾಹನ ಬಳಸಿದ ವಿವರಗಳನ್ನು ಪರೀಕ್ಷಕರಿಗೆ ತಿಳಿಸಬೇಕು.
7. ಸುಧಾರಿತ ಸೈಕಲ್ ಆಂಬುಲೆನ್ಸ್‌ನಲ್ಲಿ ರೋಗಿಯನ್ನು ಒಯ್ಯಲು ಸಮರ್ಥನಿರಬೇಕು

## 28. ಹೈನುಗಾರ (Dairyman)



1. ಹಸು, ಎಮ್ಮೆ ಅಥವಾ ಮೇಕೆಗಳ ಪೈಕಿ ಕನಿಷ್ಠ 1 ಪ್ರಾಣಿಯನ್ನು ಸುಧಾರಿಸಿ ನೋಡಿಕೊಂಡ ಅನುಭವ ಜ್ಞಾನವಿರಬೇಕು. ಅದರ ಬಗ್ಗೆ ಪೋಷಕರಿಂದ (ಮನೆಯಲ್ಲಿದ್ದರೆ) ಅಥವಾ ಆ ಕಾರ್ಯ ನಿರ್ವಹಿಸಿದ ಸ್ಥಳದ ಮಾಲೀಕರಿಂದ

ಕನಿಷ್ಠ 3 ತಿಂಗಳ ಕಾಲ ಕೆಲಸ ಮಾಡಿದ ಬಗ್ಗೆ ಒಂದು ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು.

2. ಪ್ರಾದೇಶಿಕವಾಗಿ ಬಳಸುವ ಹೈನುಗಾರಿಕೆಯ ಪರಿಕರಗಳು ಹಾಗೂ ಪಾತ್ರೆಗಳ ಉಪಯೋಗದ ಎಚ್ಚರಿಕೆ ಕ್ರಮಗಳ ಬಗ್ಗೆ ತಿಳಿದಿರಬೇಕು.
3. ಹಾಲು ಹಿಂಡುವುದು, ಮತ್ತು ಹಾಲಿನ ಪಾಶ್ಚರೀಕರಣವೂ ಸೇರಿದಂತೆ ಹಾಲನ್ನು ಶುದ್ಧಗೊಳಿಸುವ ಬಗ್ಗೆ ತಿಳಿದಿರಬೇಕು.
4. ಹಾಲಿನಿಂದ ಮೊಸರು, ಗಿಣ್ಣು, ಬೆಣ್ಣೆ ಮತ್ತು ತುಪ್ಪ ಇತ್ಯಾದಿ ಮಾಡುವ ಕ್ರಮಗಳನ್ನು ತಿಳಿದಿರಬೇಕು.
5. ಹಾಲು ಹಿಂಡುವ ಜಾನುವಾರುಗಳಿಗೆ ತಗಲುವ ಎರಡು ಸಾಮಾನ್ಯ ರೋಗಗಳ ಮತ್ತು ಅವುಗಳ ಪ್ರಥಮ ಚಿಕಿತ್ಸೆಗಳ ಬಗ್ಗೆ ಪಶುವೈದ್ಯರಿಂದ ಮಾಹಿತಿ ಪಡೆಯಬೇಕು.
6. ಕೃತಕ ಗರ್ಭದಾರಣೆಯ ಮೂಲಕ ತಮ್ಮ ಜಾನುವಾರುಗಳ ತಳಿಗಳನ್ನು ಉತ್ತಮಪಡಿಸಿಕೊಳ್ಳಲು, ಕನಿಷ್ಠ ಆರು ಜನ ನೆರೆಯುವರನ್ನು ಪ್ರೇರೇಪಿಸಬೇಕು.
7. ತನ್ನ ವೊಹಲ್ಲಾದ ಜಾನುವಾರು ಹೊಂದಿರುವ 10 ಮನೆಗಳಲ್ಲಿ, ಸಮತೋಲಿತ ಜಾನುವಾರು ಆಹಾರದ ಉತ್ತಮ ಸೂತ್ರಗಳನ್ನು ಪ್ರಚಾರ ಮಾಡಬೇಕು.

**29. ಚರ್ಚಾಪಟು (Debator)**



1. ಯುಕ್ತ ರೀತಿಯಲ್ಲಿ ನಿರ್ವಹಿಸಿದ ಚರ್ಚಾಸ್ಪರ್ಧೆಗಳಲ್ಲಿ ಕನಿಷ್ಠ ಎರಡು ವಿಷಯಗಳ ಪರವಾಗಿ ಹಾಗೂ ಕನಿಷ್ಠ ಎರಡು ವಿಷಯಗಳ ವಿರೋಧವಾಗಿ ಚರ್ಚಿಸಬೇಕು.
2. ಚರ್ಚಿತ ವಿಷಯದ ಬಗ್ಗೆ ಪೂರ್ಣ ತಯಾರಿ ನಡೆಸಿ ಪರೀಕ್ಷಕರ ಸಮ್ಮುಖದಲ್ಲಿ ಕನಿಷ್ಠ ಐದು ನಿಮಿಷಗಳ ಕಾಲ, ಚರ್ಚೆಯಲ್ಲಿ ಭಾಗವಹಿಸಬೇಕು ಮತ್ತು ತನ್ನ ಚರ್ಚೆಯ ಅಂಶಗಳನ್ನು ಸಕ್ರಮವಾಗಿ ಸಂಕ್ಷಿಪ್ತವಾಗಿ ಬರೆದು ಪರೀಕ್ಷಕರಿಗೆ ಒಪ್ಪಿಸಬೇಕು.
3. ಚರ್ಚಾಸ್ಪರ್ಧೆಯ ಸಾಮಾನ್ಯ ನಿಯಮಗಳನ್ನು ತಿಳಿದಿರಬೇಕು ಮತ್ತು ಅಧ್ಯಕ್ಷರ ಕರ್ತವ್ಯ ಹಾಗೂ ಅಧಿಕಾರಗಳ ಬಗ್ಗೆ ತಿಳಿದಿರಬೇಕು.
4. ಚರ್ಚಾಸ್ಪರ್ಧೆಯ ಅಧ್ಯಕ್ಷ ಸ್ಥಾನವನ್ನು ನಿರ್ವಹಿಸಲು ತಿಳಿದಿರಬೇಕು.
5. ಒಂದು ಗುಂಪಿನಲ್ಲಿ ಚರ್ಚೆಯುನ್ನು ಯುಶಸ್ವಿಯಾಗಿ ನಡೆಸಲು ಸಮರ್ಥನಿರಬೇಕು.

## 30. ಮರುಳುಗಾಡು ವಾಸಿ (Desert Folk)



ಕೆಳಗಿನ ಅಂಶಗಳ ಬಗ್ಗೆ ತಿಳಿದಿರಬೇಕು.

1. ತನ್ನ ಸ್ವತಃ ಅಧ್ಯಯನದ ಮೂಲಕ ಹಾಗೂ ಗಮನಿಸುವುದರಿಂದ ಮರಳುಗಾಡಿನ ಜೀವನದ ಬಗ್ಗೆ ಕೆಳಗಿನ ವಿಷಯಗಳನ್ನು ತಿಳಿಯಿರಿ.
   - i. ಭೌಗೋಳಿಕ ಹಿನ್ನೆಲೆ, ನದಿಗಳು, ಹವಾಮಾನ ಇತ್ಯಾದಿ.
   - ii. ಜನರು ಹೇಗೆ ಜೀವಿಸುತ್ತಾರೆ?
   - iii. ಜೀವನದ ರೀತಿ, ನೀತಿಗಳು, ಜೀವನ ಮಟ್ಟ, ಸಾಮಾನ್ಯ ಉಡಿಗೆ ತೊಡಿಗೆ, ಆಹಾರ ಇತ್ಯಾದಿ.
   - iv. ಜನರ ಸಾಮಾನ್ಯ ಸಂಪ್ರದಾಯಗಳು, ವಿಶೇಷ ಆಚರಣೆಗಳು, ಸಂಸ್ಕೃತಿ, ಧರ್ಮ, ಮೂಢನಂಬಿಕೆಗಳು ಮತ್ತು ನಿಷೇಧಗಳು.
   - v. ಜೀವನೋಪಾಯ ಗಳಿಸುವ ವಿಧಾನಗಳು.
   - vi. ಪ್ರಕೃತಿ ವಿಕೋಪದಿಂದ ಜನರಿಗೆ ಒದಗುವ ಸಾಮಾನ್ಯ ತೊಂದರೆಗಳು ಮತ್ತು ಅವುಗಳ ಪರಿಹಾರ ಅಂಶಗಳ ಬಗ್ಗೆ ಅಧ್ಯಯನ ಮಾಡಿ.

ಈ ಮೇಲಿನ ಅಂಶಗಳನ್ನೊಳಗೊಂಡ ಮೂರು ಚಾರಣಗಳ ಬಳಿಕ ವರದಿಯನ್ನು ಸಲ್ಲಿಸಿ. ವರದಿಯು, ಆರಿಸಿಕೊಂಡ ಗ್ರಾಮ ಅಥವಾ ಪಟ್ಟಣದಿಂದ 24 ಚ.ಕಿ.ಮೀ. ಸುತ್ತಳತೆಯಲ್ಲಿ ಬರುವ ಪ್ರದೇಶವನ್ನು ಒಳಗೊಂಡಿರಬೇಕು. ಜೊತೆಗೆ ಆ ಪ್ರದೇಶದಲ್ಲಿ ಬರುವ ಗ್ರಾಮಗಳು, ವಸತಿ ಸ್ಥಳಗಳು, ನೀರು ಸಿಗುವ ಜಾಗ, ಓಯಸಿಸ್ ಮತ್ತು ಶಿಬಿರ ಹೂಡಬಹುದಾದ ಸ್ಥಳಗಳ ಮಾಹಿತಿಗಳನ್ನು ಒಳಗೊಂಡಿರಬೇಕು.

2. ಪ್ರಕೃತಿ ಅಧ್ಯಯನ :
   - i. ಹವಾಮಾನ ಸಂಬಂಧದ ಸಾಮಾನ್ಯ ಗಾದೆಗಳನ್ನು ತಿಳಿದಿರಬೇಕು ಹಾಗೂ ಸಂಗ್ರಹಿಸಬೇಕು ಮತ್ತು ಹೇಳಿಕೆಗಳ ಹಿನ್ನೆಲೆಯಲ್ಲಿ, ತನ್ನ ಸ್ವತಃ ಸಂವೀಕ್ಷಣಾ ಆಧಾರದ ಮೇಲೆ ವರದಿಯನ್ನು ತಯಾರಿಸಬೇಕು.
   - ii. ಗಾಳಿಯ ವೇಗವನ್ನು ಕಂಡುಹಿಡಿಯಬೇಕು.
3. ನೀರು ಮತ್ತು ನೀರಾವರಿ :
   - i. ನೀರಾವರಿಯ ವಿಧಾನಗಳನ್ನು ತಿಳಿದಿರಬೇಕು. ನೀರನ್ನು ಶುದ್ಧಗೊಳಿಸುವ ವಿಧಾನಗಳು ಮತ್ತು ಕಲುಷಿತ ನೀರನ್ನು ಉಪಯೋಗಿಸುವುದರಿಂದ ಆಗುವ ತೊಂದರೆಗಳನ್ನು ತಿಳಿದಿರಬೇಕು.

ನೀರಿನ ಅಭಾವವನ್ನು ತೊಡೆದುಹಾಕಲು ಸರ್ಕಾರದಿಂದ ಹೊಂದಬಹುದಾದ ಸಹಾಯದ ಬಗ್ಗೆ ತಿಳಿದಿರಬೇಕು.

ii. ಪ್ರದೇಶದ ಮುಖ್ಯ ಬೆಳೆಗಳು ಹಾಗೂ ದವಸ ಧಾನ್ಯಗಳ ಬಗ್ಗೆ ತಿಳಿದಿರ-ಬೇಕು. ಪ್ರದೇಶದಲ್ಲಿ ನೀರಾವರಿಗಾಗಿ ಉಪಯೋಗಿಸುವ ಕಾಲುವೆ ಅಥವಾ ಅಣೆಕಟ್ಟುಗಳನ್ನು ತಿಳಿದಿರಬೇಕು. ಮತ್ತು ಅಚ್ಚುಕಟ್ಟು ಪ್ರದೇಶ-ದಲ್ಲಿ ನೀರನ್ನು ಉಳಿತಾಯ ಮಾಡುವ ಬಗ್ಗೆ ತಿಳಿದಿರಬೇಕು.

4. **ಕರಕುಶಲತೆ :** ಪ್ರದೇಶದಲ್ಲಿ ದೊರೆಯುವ ಸಹಜ ವಸ್ತುಗಳನ್ನು ಉಪಯೋಗಿಸಿ ಸಣ್ಣ ಹಗ್ಗವನ್ನು ತಯಾರಿಸಿ ಅಥವಾ ಮಂಚವನ್ನು ಹೆಣೆಯಿರಿ ಅಥವಾ ಮಾದರಿಗಳನ್ನು ತಯಾರಿಸಿ, ಅಥವಾ ಹೊಚ್ಚನ್ನು ಸಿದ್ಧಪಡಿಸಿ (ಹುಲ್ಲಿ, ತೆಂಗಿನಗರಿ, ಜೊಂಡುಗಳಿಂದ ತಯಾರಿಸಿದ ಹೊದಿಕೆ) ಅದರ ಉಪಯೋಗವನ್ನು ತೋರಿಸಿಕೊಡಿ.

5. ಚಾರಣ :

i. ಮರಳುಗಾಡಿನಲ್ಲಿ ವಿಶೇಷ ಪ್ರಕೃತಿ ಘಟನೆಗಳನ್ನು ಅಂದರೆ ಬಿಸಿಲ್ಗುದುರೆ, ಭನ್ವಾರಿ(ಭೂ ಕುಸಿತ)ಗಳಂತಹವುದರ ತಿಳಿವಳಿಕೆ-ಯನ್ನು ಪಡೆಯಲು ಚಾರಣ ಕೈಗೊಳ್ಳಬೇಕು.

ii. ಮಿಡತೆ ಹಾವಳಿ ವಿರುದ್ಧ (Locust) ಕೈಗೊಳ್ಳುವ ಕಾರ್ಯಾಚರಣೆ ಯಲ್ಲಿ ಕನಿಷ್ಠ 51 ಗಂಟೆಗಳ ಕಾಲ ಸೇವೆ ಸಲ್ಲಿಸಬೇಕು. ಅಥವಾ ಇತರ ಅನುಮೋದಿತ ಸಮಾಜಸೇವಾ ಶಿಬಿರಗಳನ್ನು ಸೇವೆ ಸಲ್ಲಿಸಬೇಕು.

## 31. ವಿಪತ್ತು ನಿರ್ವಹಣೆ (Disaster Management)



1. ವಿಪತ್ತು (Disaster) ಮತ್ತು ಅನಾಹುತಗಳ (Hazard) ಬಗ್ಗೆ ವಿವರಣೆ (Definition) ತಿಳಿದಿರಬೇಕು.
2. ಆಯಾ (ನಿಮ್ಮ) ಪ್ರದೇಶದಲ್ಲಿ ಸಂಭವಿಸ-ಬಹುದಾದ ಸ್ವಾಭಾವಿಕ ಮತ್ತು ಮಾನವಕೃತ ವಿಪತ್ತುಗಳ ಬಗ್ಗೆ ತಿಳಿದಿರಬೇಕು.
3. ವಿಪತ್ತು ನಿರ್ವಹಣೆಗಾಗಿ ಕೆಲಸ ಮಾಡುತ್ತಿರುವ ವಿವಿಧ ಸಂಘ ಸಂಸ್ಥೆಗಳ ಬಗ್ಗೆ ತಿಳಿದಿರಬೇಕು.
4. ನಾಗರಿಕ ಸಂರಕ್ಷಣೆ ಮತ್ತು ಅಗ್ನಿಶಾಮಕ ದಳ ಬಗ್ಗೆ ಮೂಲಭೂತ ತಿಳುವಳಿಕೆ ಇರಬೇಕು.
5. ವಿಪತ್ತು ನಿರ್ವಹಣೆಗೆ ತಯಾರಿರುವ ಬಗ್ಗೆ ವಿವರಿಸಿ ಹೇಳಲು ಶಕ್ತರಿರಬೇಕು ಮತ್ತು ಆ ಬಗ್ಗೆ ಅನುಸರಿಸಬೇಕಾದ ಕ್ರಮಗಳನ್ನು ಪಟ್ಟಿಮಾಡಬೇಕು.

6. ಮನೆಯಲ್ಲಿ, ಕಾರ್ಖಾನೆಗಳಲ್ಲಿ, ರಸ್ತೆ ಸಂಚಾರದಲ್ಲಿ ಅನುಸರಿಸಬೇಕಾದ ಸುರಕ್ಷತಾ ಕ್ರಮಗಳ ಬಗ್ಗೆ ತಿಳಿದಿರಬೇಕು.
7. ರಸ್ತೆಗಳಲ್ಲಿ, ಸ್ನಾನ ಘಟ್ಟಗಳಲ್ಲಿ, ಜನರು ಸೇರುವ ಕಡೆಗಳಲ್ಲಿ ಹೀಗೆ ನಿಮ್ಮ ಪ್ರದೇಶದಲ್ಲಿ ಅನಾಹುತಗಳು ಸಂಭವಿಸಬಹುದಾದ ಸ್ಥಳಗಳನ್ನು ವಿವರಿಸಬೇಕು.
8. ವಾರ್ತಾ ಸೇವಾ ಕೇಂದ್ರವನ್ನು ಸ್ಥಾಪಿಸಲು ಶಕ್ತರಿರಬೇಕು. ಫ್ಯಾಕ್ಸ್ / ಟೆಲಿಫೋನ್ / ಟೆಲೆಕ್ಸ್ / ಎಸ್.ಎಂ.ಎಸ್. / ಇ–ಮೇಲ್ / ಯು ಟ್ಯೂಬ್ / ಫೇಸ್‌ಬುಕ್ ಮುಂತಾದ ರೀತಿಗಳಲ್ಲಿ ವಾರ್ತೆಗಳನ್ನು ಕಳುಹಿಸಲೂ ವಿಪತ್ತು ಸಂಭವಿಸಿದಾಗ ಸ್ಥಳೀಯ ಪರಿಸ್ಥಿತಿಯನ್ನು ವರದಿ ಮಾಡಲೂ ತಿಳಿದಿರಬೇಕು.
9. ವಿಪತ್ತು ನಿರ್ವಹಣೆಯಲ್ಲಿ ಮಾಧ್ಯಮದ ಪಾತ್ರವನ್ನು ತಿಳಿದಿರಬೇಕು.
10. ಪುನರ್ವಸತಿ ವಿಧಾನಗಳನ್ನು ನಿರೂಪಿಸಲು ಶಕ್ತರಿರಬೇಕು ಮತ್ತು ಆ ದಿಕ್ಕಿನಲ್ಲಿ ಬೆಂಬಲ ನೀಡಬಲ್ಲ ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳನ್ನು ಕಂಡುಕೊಳ್ಳಲು ತಿಳಿದಿರಬೇಕು.

### 32. ಮಾದಕ ವಸ್ತು ಜಾಗೃತಿ (Drug awareness)



1. ದುರುಪಯೋಗಪಡಿಸಿಕೊಳ್ಳಬಹುದಾದ ವಿವಿಧ ಮಾದಕ ವಸ್ತುಗಳ (ಮಾಲಿಕತ್ವದ (Proprietary) ಅಥವಾ ರಹಸ್ಯದ (Cladestine)] ಅರಿವಿರಬೇಕು.
2. ವ್ಯಸನ (Addiction) ಅವಲಂಬನೆ (Dependence), ಹಿಂತೆಗೆಯುವಿಕೆ (Withdrawal) ಮತ್ತು ಸಹನೆ (Tolerance) ಪದಗಳ ಅರ್ಥವನ್ನು ತಿಳಿದಿರಬೇಕು.
3. ಮಾದಕ ವಸ್ತುಗಳ ದುರುಪಯೋಗದಿಂದ ಆರೋಗ್ಯಕ್ಕುಂಟಾಗುವ ಅಪಾಯಗಳ ಅರಿವಿರಬೇಕು.
4. ಏಕೆ ಮತ್ತು ಹೇಗೆ ಜನರು ಮಾದಕವಸ್ತುಗಳಿಗೆ ವ್ಯಸನಿಗಳಾಗುತ್ತಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು.
5. ಮಾದಕ ವಸ್ತು ಜಾಗೃತಿಯ ಬಗ್ಗೆ ಒಂದು ಕಾರ್ಯಕ್ರಮವನ್ನು ಯೋಜಿಸಬೇಕು.
6. ದ್ರವ್ಯ ವ್ಯಸನಿಗಳಿಗಾಗಿ ಇರುವ ವಿವಿಧ ಬಗೆಯ ಸಹಾಯಗಳ ಅರಿವಿರಬೇಕು

### 33. ಜೀವ ಪರಿಸರ ತಜ್ಞ (Ecologist)



1. ಪರಿಸರ ಸಮತೋಲನಕ್ಕಾಗಿ ಕೆಲಸ ಮಾಡುತ್ತಿರುವ ಇತರೆ ಪ್ರತಿನಿಧಿ ಸಂಸ್ಥೆಗಳ ಅರಿವಿರಬೇಕು.
2. ಚರ್ಚೆಗಳ ಮೂಲಕ, ಶ್ರವಣ ದೃಶ್ಯ ಮಾಧ್ಯಮಗಳ ಮೂಲಕ, ಈ ವಿಷಯದ ಬಗ್ಗೆ ಜನರಿಗೆ ಶಿಕ್ಷಣ ಕೊಡಲು, ಸಮೀಪದಲ್ಲಿರುವ ವಿಷಯ ತಜ್ಞರ ಸಹಕಾರ ಪಡೆಯಬೇಕು.
3. ಮರ ಕಡಿಯುವುದರ ವಿರುದ್ಧ ಪ್ರಚಾರ ಮಾಡಬೇಕು.
4. ಮಳೆಗಾಲದಲ್ಲಿ ವನಮಹೊತ್ಸವ ಏರ್ಪಡಿಸಬೇಕು.
5. ಪ್ರಾದೇಶಿಕವಾಗಿ ಪರಿಸರ ಮಾಲಿನ್ಯ ಸಮಸ್ಯೆಗಳ ಬಗ್ಗೆ ಜನರಿಗೆ ಶಿಕ್ಷಣ ನೀಡಬೇಕು.
6. ಈ ಕೆಳಗಿನವುಗಳಲ್ಲಿ ಯಾವುದಾದರೂ 3 ಸಮಸ್ಯೆಗಳನ್ನು ಪರಿಹರಿಸಲು ಕೆಲಸ ಮಾಡಬೇಕು.
   - ಅ. ಮಣ್ಣು ಸವಕಳಿ
   - ಆ. ಮರ ಕಡಿಯುವುದು
   - ಇ. ಪ್ರಾಣಿವಧೆ
   - ಈ. ನೀರುಪೋಲು ಮಾಡುವುದು ಅಥವಾ ಜಲಮಾಲಿನ್ಯ
   - ಉ. ವಾಯುಮಾಲಿನ್ಯ
   - ಊ. ಕಸ ಹಾಕುವುದು

### 34. ವಿದ್ಯುತ್ ತಜ್ಞ (Electrician)



1. ವಿದ್ಯುತ್ ಕಾರ್ಯದಲ್ಲಿ ಬಳಸುವ ಪದಗಳು ಮತ್ತು ಅಳತೆಗಳ ಮೂಲಭೂತ ಅರಿವಿರಬೇಕು.
2. ವಿದ್ಯುತ್ ತಂತಿಗಳ ಜೋಡಣೆ ಮಾಡಬೇಕು. ಕೆಟ್ಟುಹೋಗಿರುವ ಸ್ವಿಚ್‌ಗಳು, ದೀಪಗಳು, ಹೋಲ್ಡರ್‌ಗಳು, ಮತ್ತು ಫ್ಯೂಸ್ ತಂತಿಗಳನ್ನು ಬದಲಾಯಿಸಬೇಕು. ಅನುಸರಿಸಬೇಕಾದ ಅವಶ್ಯಕ ಮುಂಜಾಗ್ರತೆ ಕ್ರಮಗಳ ಅರಿವಿರಬೇಕು.
3. ಪ್ರಾಥಮಿಕ ಕೋಶಗಳು, ವಿದ್ಯುತ ಗಂಟೆಗಳು, ದೂರವಾಣಿಗಳು ಮೋಟರ್‌ಗಳು ಮತ್ತು ಡೈನಮೋಗಳ ರಚನೆಯ ಬಗ್ಗೆ ತಿಳಿದಿರಬೇಕು. ಸರಳ ಎಲೆಕ್ಟ್ರಿಕ್ ಮ್ಯಾಗ್ನೆಟ್ ಅಥವಾ ಟೆಲಿಗ್ರಾಫ್ ಕೀ ತಯಾರಿಸಿ ಉಪಯೋಗಿಸಬೇಕು.

4. ಮನೆಯಲ್ಲಿ ಬಳಸುವ ಇಸ್ತ್ರಿಪೆಟ್ಟಿಗೆ, ಕೆಟಲ್ ಅಥವಾ ಹೀಟರ್‌ನ ಶಾಖ ಸುರುಳಿ(Heating element)ಗಳನ್ನು ಬದಲಾಯಿಸಲು ಸಮರ್ಥನಾಗಿರಬೇಕು.

5. ಮನೆಯ ಮೀಟರನ್ನು ಓದುವ ಮತ್ತು ವಿದ್ಯುತ್ ಬಳಕೆಯನ್ನು ಲೆಕ್ಕಾಚಾರ ಮಾಡುವ ಸಾಮರ್ಥ್ಯವಿರಬೇಕು.

6. ವಿದ್ಯುತ್‌ನ ಸುರಕ್ಷಾ ವಿಧಾನಗಳು ಮತ್ತು ವಿದ್ಯುತ್ ಆಘಾತದ ಪ್ರಥಮ ಚಿಕಿತ್ಸಾ ಕ್ರಮಗಳನ್ನು ತಿಳಿದಿರಬೇಕು.

**35. ವಿದ್ಯುನ್ಮಾನ (Electronics)**



1. ಪ್ರಾಥಮಿಕ ವಿದ್ಯುನ್ಮಾನ ಕಲ್ಪನೆಯನ್ನು ವಿವರಿಸಬೇಕು.

2. ರೋಧಕಗಳು (Resistors) ಸಂಗ್ರಾಹಕ ಗಳು (Capacitors) ಪರಿವರ್ತಕಗಳು. (Rectifiers) ಡಯೋಡ್‌ಗಳು (Diodes), ಟ್ರಾನ್ಸಿಸ್ಟರ್‌ಗಳು (Transistors) ಮತ್ತು ಅಂತರ್ಜಾಲ ಮಂಡಲಗಳ (Integrated circuits) ವೈವಿಧ್ಯತೆ ಮತ್ತು ಕಾರ್ಯನಿರ್ವಹಣೆಯ ಬಗ್ಗೆ ಅರಿವಿರಬೇಕು.

3. ಮುದ್ರಿತ ಮಂಡಲ ಫಲಕದ (Printed Circuit Board) ಭಾಗಗಳನ್ನು ಜೋಡಿಸುವ, ಬೆಸುಗೆ ಹಾಕುವ ಮತ್ತು ಬೆಸುಗೆ ತೆಗೆಯುವ ಯಥಾರ್ಥ ವಿಧಾನಗಳನ್ನು ಪ್ರದರ್ಶಿಸಬೇಕು.

4. ಸರಳ ಮಂಡಲ ನಕ್ಷೆಯನ್ನು (Simple circuit diagram) ಓದಲು ಮತ್ತು ಭಾಗಗಳನ್ನು ಗುರುತಿಸಲು ಸಮರ್ಥನಿರಬೇಕು.

5 ವಿದ್ಯುನ್ಮಾನ ಪರೀಕ್ಷಾ ಉಪಕರಣಗಳ ಅರಿವಿರಬೇಕು.

6. ಕಿಟ್ ಅನ್ನು ಬಳಸಿ, ಸರಳ ವಿದ್ಯುನ್ಮಾನ ಉಪಕರಣ ವನ್ನು ತಯಾರಿಸಬೇಕು.

**36. ಮನೋರಂಜಕ (Entertrainer)**



ಮನರಂಜನೆ ಕಾರ್ಯಕ್ರಮದ ವಿಷಯ ವಸ್ತುವು, ಸಮುದಾಯದ ಅವಶ್ಯಕತೆಗಳಿಗೆ ಸಂಗತವಾದ ವಿಷಯಕ್ಕೆ ಸಂಬಂಧಿಸಿರಬೇಕು. ಉದಾಹರಣೆಗೆ – 1. ಜನನ ನಿಯಂತ್ರಣ 2. ವರದಕ್ಷಿಣೆ ವಿರೋಧ 3. ರಾಷ್ಟ್ರೀಯ ಐಕ್ಯತೆ 4. ಸಂರಕ್ಷಣೆ 5. ಪೌಷ್ಟಿಕತೆ 6. ಪಾಕೀಜು ವ್ಯವಸ್ಥೆ ಇತ್ಯಾದಿ.

1. ಕಂಠಪಾಠ, ಹಾಡುಗಳು, ಇಂದ್ರಜಾಲ, ವ್ಯಕ್ತಿ ಚಿತ್ರಣ, ಕಥೆಗಳು, ಒಳಧ್ವನಿಯಿಂದ ಮಾತನಾಡುವುದು (Ventriloquism) ಅಮಲಿನ ಭಾಷಣ, ಹೆಜ್ಜೆ ನೃತ್ಯ (Step dance), ಬ್ಯಾಂಜೋ ನುಡಿಸುವುದು. ಶಿಳ್ಳೆ ಹೊಡೆಯುವುದು, ಬಾಯಿನಲ್ಲಿ ಸಿಳ್ಳು ಹಾಕುತ್ತಾ ಹಾಡುವುದು, (Penny whistle) ರಾಗಮಾಲಿಕೆ ನುಡಿಸುವುದು, ಕೊಳಲು ನುಡಿಸುವುದು, ವೀಣೆ ಅಥವಾ ಷಹನಾಯಿ ನುಡಿಸುವುದು ಇತ್ಯಾದಿಗಳ ವೈವಿಧ್ಯಮಯ ಕಾರ್ಯಕ್ರಮಗಳ ಮನರಂಜನೆಯನ್ನು ಕನಿಷ್ಠ 10 ನಿಮಿಷಗಳ ಕಾಲ ನೀಡಬೇಕು.

ಅಥವಾ

ತನ್ನ ಪಟಾಲಂಗಾಗಿ 20 ನಿಮಿಷಗಳಿಗೆ ಕಡಿಮೆ ಇಲ್ಲದಂತೆ ಒಂದು ನಾಟಕವನ್ನು ಅಭ್ಯಸಿಸಿ ಪ್ರದರ್ಶಿಸಬೇಕು.

ಅಥವಾ

ಒಂದು ನಾಟಕದಲ್ಲಿ ತನ್ನ ನಿರ್ವಹಣೆಯನ್ನು ಪರಾಮರ್ಶಿಸಲ್ಪಡಬೇಕು.

ಅಥವಾ

ಮೂರು ತಿಂಗಳುಗಳವರೆಗೆ ವಿಸ್ತರಿಸಿದ ಕನಿಷ್ಠ 4 ಸ್ಥಳಗಳಲ್ಲಿ ಪ್ರದರ್ಶಿಸಿದ ನಾಟಕ ಅಥವಾ ಗುಂಪು ಪ್ರದರ್ಶನದಲ್ಲಿ ತನ್ನ ಅಭಿನಯದ ಬಗ್ಗೆ ತೀರ್ಪು ಪಡೆಯಬೇಕು.

2. ಈ ಎಲ್ಲಾ ಸಂದರ್ಭಗಳಲ್ಲಿನ ಕಾರ್ಯಕ್ರಮವು ಮಿಶ್ರ ಪ್ರೇಕ್ಷಕರ ಸಮ್ಮುಖ ನಡೆದಿರಬೇಕು.

**37. ಅನ್ವೇಷಕ (Explorer)**



1. ಕನಿಷ್ಠ 5 ಕಿ.ಮೀ. ಸುತ್ತಳತೆಯ ಸ್ಥಳವನ್ನು 12 ತಿಂಗಳ ಅವಧಿಯೊಳಗೆ ಸಮಗ್ರವಾಗಿ ಸುತ್ತಾಡಿ (ತನ್ನ ಮನೆಯ ಅಥವಾ ದಳದ ಕೇಂದ್ರ ಸ್ಥಾನದ ಪರಿಸರದಲ್ಲಿ ಸುತ್ತುವುದಾದರೆ ಒಳ್ಳೆಯದು) ಈ ಕೆಳಗಿನ ಯಾವುದಾದರೊಂದು ಉದ್ದೇಶವನ್ನು ಸಾಧಿಸಬೇಕು.

    i. ಹಿಂದಿನ ಮತ್ತು ಈಗಿನ ನಕಾಶೆಯಲ್ಲಿ ತೋರಿಸಿರುವ ಎಲ್ಲಾ ಕಾಲುದಾರಿ, ಕುದುರೆ ಓಡುವ ದಾರಿ ಮತ್ತು ನೀರು ಹರಿವ ಹಳ್ಳಗಳನ್ನು ಗಮನಿಸಿ ಮತ್ತು ಅವುಗಳ ಈಗಿನ ಪರಿಸ್ಥಿತಿಯನ್ನು ವರದಿ ಮಾಡಬೇಕು.

    ii. ಸ್ಥಳೀಯ ಕೈಗಾರಿಕೆಗಳು, ವ್ಯವಸಾಯದ ಕ್ರಮಗಳ ಸ್ವರೂಪ, ಉಪಯೋಗಕ್ಕೆ ಬರುವಂತಹ ಗೊಮಾಳ ಭೂಮಿ ಮತ್ತು ಖಾಲಿ ಭೂಮಿಗಳ ಸುಮಾರು ವಿಸ್ತಾರ ಮತ್ತು ಅವುಗಳನ್ನು

ಉಪಯೋಗಿಸಿ ಕೊಂಡಿರುವ ರೀತಿಯ ಬಗ್ಗೆ ಸಂಪೂರ್ಣ ವರದಿಯನ್ನು ಸಿದ್ಧಮಾಡಬೇಕು.

iii. ಸ್ಥಳದ ಚರಿತ್ರೆಯನ್ನು ಪರಿಚಯಿಸಿ, ಈ ಕೆಳಗಿನ ಅಂಶಗಳನ್ನೊಳಗೊಂಡಂತೆ, ಸಂಪೂರ್ಣ ಮಾಹಿತಿಯನ್ನು ತಯಾರಿಸಬೇಕು, ಯಾವುದೇ ಪ್ರಾಚೀನ ಅವಶೇಷಗಳು ಮತ್ತು ವಿಶೇಷ ಗಮನ ಹರಿಸುವ ಸ್ಥಳಗಳ ವಿವರಣೆಯನ್ನು ನೀಡಬೇಕು, ಜಾಹಿರಾತು ಮಾಧ್ಯಮಗಳು ಇತ್ಯಾದಿ ಹಾವಳಿಯಿಂದ ಅವಶೇಷಗಳು ಹಾಳಾಗಿರುವ ಬಗ್ಗೆ ತಿಳಿಸಬೇಕು.

iv. ಅಂತಹ ಸ್ಥಳಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಮರಗಳು, ಹೂಗಳು, ಹಕ್ಕಿಗಳು ಮತ್ತು ಪ್ರಾಣಿಗಳನ್ನು ಕುರಿತು ವರದಿಯನ್ನು ಸಿದ್ಧಮಾಡಬೇಕು.

2. 8 ಕಿ.ಮೀ. ದೂರಕ್ಕೆ ಕಡಿಮೆ ಇಲ್ಲದೆ ದೋಣಿ ಯಾನ ಮಾಡುವಂತಹ ನದಿ ಅಥವಾ ಕಾಲುವೆಯ ಬಗ್ಗೆ ವಿವರವಾಗಿ ತಿಳಿದಿರಬೇಕು. ಉಬ್ಬರವಿಳಿತಗಳು, ಕಾಲುವೆಗಳು, ಆಳವಿಲ್ಲದ ಜಾಗಗಳು ಮಣ್ಣಿನ ದಡಗಳ ಬಗ್ಗೆ ತಿಳಿದಿರಬೇಕು. ಹೊಯಿಲು (tides) ಹೆಚ್ಚಾಗಿರುವ ಸ್ಥಳಗಳು, ಲಂಗರು ಹಾಕುವ ಸ್ಥಳಗಳು, ಸ್ಥಳೀಯ ರೀತಿ ರಿವಾಜುಗಳು, ಸಂಪ್ರದಾಯ ಗಳು, ಸ್ಥಳೀಯ ರಸ್ತೆ ನಿಯಮಗಳು, ಇತ್ಯಾದಿ ತಿಳಿದಿರಬೇಕು. ಸ್ಕೌಟುಗಳಿಗೆ ಹಾಯಲು ಅಡ್ಡಿ ಬರುವ ರಕ್ಷಣಾ ನಿಬಂದನೆಗಳಿರುವ (ಉದಾ:-ಸ್ನಾನಕ್ಕೆ ಅಡ್ಡಿಯಿರುವ ಜಾಗ, ಕಲುಷಿತವಾಗಿದಂತೆ ತಡೆಗಟ್ಟಬೇಕಾದ ಜಾಗ) ಮತ್ತು ವಿಶೇಷ ಅಪಾಯವಿರುವ ಸ್ಥಳಗಳ ಬಗ್ಗೆ ಸಹ ತಿಳಿದಿರಬೇಕು.

3. ಲಂಗರು ಸ್ಥಳಕ್ಕೆ ಹೊಂದಿಕೊಂಡಿರುವ ಎರಡು ಶಿಬಿರ ನಿವೇಶನಗಳನ್ನು ತಿಳಿದಿರಬೇಕು. ಆ ಸ್ಥಳಗಳ ಮಾಲಿಕರ ಹೆಸರು ವಿಳಾಸ, ಕುಡಿಯುವ ನೀರು ಸಿಗುವ ಸ್ಥಳ ಇವನ್ನೂ ಸಹ ತಿಳಿದಿರಬೇಕು.

**ಸೂಚನೆ :** ಈ ಎಲ್ಲಾ ಅಂಶಗಳನ್ನೊಳಗೊಂಡಂತೆ ಸಮಗ್ರ ಶೋಧನೆ ಬಗ್ಗೆ ವಿವರವಾದ (ಕಿ.ಮೀ.ಗಳಲ್ಲಿ ಕ್ರಮಿಸಿದ ದೂರ, ರೇಖಾಚಿತ್ರಗಳು, ನಕಾಶೆಗಳನ್ನು ಒಳಗೊಂಡಂತೆ) ಲೇಖನವನ್ನು ಒಪ್ಪಿಸಬೇಕು.

**38. ಘಟನಾ ನಿರ್ವಾಹಕ (Event Manager)**



1. ಒಂದು ಸಂಘಟನೆಯನ್ನು ಏರ್ಪಡಿಸುವಾಗಿನ ಕಾರ್ಯ ವಿಧಾನವನ್ನು ತಿಳಿದಿರಬೇಕು.

2. ನಿಮ್ಮ ಪೆಟ್ರೋಲು / ದಳದೊಳಗೆ 2 ಕಾರ್ಯಕ್ರಮಗಳನ್ನು ಸಂಘಟಿಸಿ, ಅವುಗಳಲ್ಲಿ ಸಹಾಯಕರಾಗಿದ್ದು, ವರದಿ ಸಲ್ಲಿಸಬೇಕು.

3. ನಿಮ್ಮ ಜಿಲ್ಲಾ / ರಾಜ್ಯ ಮಟ್ಟದ ಮೇಳದಲ್ಲಿ ಎರಡು ದಿನಗಳಿಗೆ ಕಡಿಮೆ ಇಲ್ಲದಂತೆ ಸಹಾಯ ಮಾಡಬೇಕು, ನಿಮ್ಮದೇ ಸ್ವಂತ ತಂಡ ಮಾಡಿಕೊಂಡು ಕ್ರೀಡಾ / ಸಾಂಸ್ಕೃತಿಕ ಕಾರ್ಯಕ್ರಮವನ್ನು ನಿಮ್ಮ ಸ್ಥಳದಲ್ಲಿ ಸಂಘಟಿಸಿ ಮತ್ತು ಒಂದು ವರದಿ ಸಲ್ಲಿಸಿ.

## 39. ನಾನು ಮುಕ್ತವಾಗಿರುವಿಕೆ (Free being me)



1. "ನಾನು ಮುಕ್ತವಾಗಿರುವಿಕೆ" ಎನ್ನುವುದನ್ನು ಅರ್ಥ ಮಾಡಿಕೊಳ್ಳಬೇಕು ಮತ್ತು ಆ ಬಗ್ಗೆ ಪ್ರಮಾಣ ಸ್ವೀಕಾರ ಮಾಡಬೇಕು. ಈ ಕಾರ್ಯಕ್ರಮದಲ್ಲಿ ಮತ್ತಷ್ಟು ಮುಂದುವರೆಯುವುದಾಗಿ ತಿಳಿಸಬೇಕು. ನೀವೊಬ್ಬ ವಿಶೇಷ ವ್ಯಕ್ತಿ ಎನ್ನುವುದನ್ನು ಕಂಡುಕೊಳ್ಳಬೇಕು.
2. ಎಫ್.ಬಿ.ಎಂ. ಕಾರ್ಯಕ್ರಮಗಳಲ್ಲಿ ಗೆಲುವಿನಿಂದ ಭಾಗವಹಿಸಬೇಕು. ಮತ್ತು WAGGS ಅವರ FBM ಪದಕವನ್ನು ಗಳಿಸಬೇಕು.
3. ನಿಮ್ಮ ಶಾಲೆಯ / ನೆರೆಹೊರೆಯ ಕನಿಷ್ಠ 50 ಸ್ಕೌಟುಗಳು / ವಿದ್ಯಾರ್ಥಿಗಳಿಗೆ FBM ಬಗ್ಗೆ ಶಿಕ್ಷಣ ನೀಡಬೇಕು. ಆ ಸ್ಕೌಟುಗಳು / ವಿದ್ಯಾರ್ಥಿಗಳ ಪಟ್ಟಿ ಮತ್ತು ವಿಳಾಸವನ್ನು ಸ್ಕೌಟ್ ಮಾಸ್ಟರಿಗೆ ವರದಿ ಮಾಡಬೇಕು.

## 40. ರೈತ (Farmer)



1. ಒಂದು ಕೃಷಿ ಕ್ಷೇತ್ರದಲ್ಲಿ ಕನಿಷ್ಠ 6 ತಿಂಗಳ ಕಾಲ ಕೆಲಸ ಮಾಡಬೇಕು.
2. ಆಧುನಿಕ ಕೃಷಿ ಉಪಕರಣಗಳ ಬಗ್ಗೆ ಸಕ್ರಿಯ ಮಾಹಿತಿ ಹೊಂದಿರಬೇಕು.
3. ಸುಧಾರಿತ ಬೀಜಗಳು, ರಾಸಾಯನಿಕ ಗೊಬ್ಬರ, ಕೀಟನಾಶಕ, ಬಿತ್ತುವುದು ಮತ್ತು ಕೊಯ್ಲು ಮಾಡುವುದು ಇವುಗಳ ಅರಿವಿರಬೇಕು.
4. ಜಾನುವಾರುಗಳು, ಕುದುರೆಗಳು, ಕುರಿಗಳು, ಹಂದಿಗಳು ಮತ್ತು ಕೋಳಿಗಳ ಸಂರಕ್ಷಣೆಯ ತಿಳುವಳಿಕೆಯೂ ಸೇರಿದಂತೆ ಕ್ಷೇತ್ರದ ಮಾಮೂಲು ಕಾಲೋಚಿತ ಜಾನುವಾರು ಕಾರ್ಯಗಳ ಪರಿಚಯವಿರಬೇಕು.
5. ಕಳೆ ಕೀಳುವುದು, ಗಿಡಗಳಿಗೆ ನೀರು ಹಾಯಿಸುವುದು ಮತ್ತು ಅನಂತರದ ಕೃಷಿ ಕಾರ್ಯಗಳನ್ನು ಮಾಡಲು ಸಮರ್ಥನಿರಬೇಕು.
6. ಆಹಾರಧಾನ್ಯಗಳ ಸಂಗ್ರಹಣೆಯ ವಿಧಾನಗಳನ್ನು ತಿಳಿದಿರಬೇಕು.
7. ಜಾನುವಾರು ಪ್ರಾಣಿಗಳಿಗಾಗಿ "ಉಪ್ಪು ಮುದ್ದೆ" (Salt Lick) ತಯಾರಿಸಬೇಕು.

8. ನೀರಿನ ಕೊರತೆ ಇರುವ ಕಡೆ ಹನಿ ನೀರಾವರಿಯನ್ನು ಪ್ರಚಾರ ಮಾಡಬೇಕು.

## 41. ಅಗ್ನಿಶಾಮಕ (Fireman)



1. ಎಣ್ಣೆ ದೀಪ, ಸ್ಪಿರಿಟ್ ಒಲೆ, ಹತ್ತಿ ಬಟ್ಟೆ, ಹಬ್ಬದ ಅಲಂಕಾರಗಳು ಹತ್ತಿ, ಉಣ್ಣೆ, ಸೆಲ್ಯುಲಾಯ್ಡ್‌ಗಳಂತಹ ಹತ್ತಿ ಉರಿಯುವ ವಸ್ತುಗಳ ಅಪಾಯಗಳು ಹಾಗೂ ಸೂರ್ಯಕಿರಣಗಳನ್ನು ಕೇಂದ್ರೀಕರಿಸುವ ಬಗ್ಗೆ ತಿಳಿದಿರಬೇಕು.

2. ಗ್ಯಾಸ್ ಸೋರುವುದನ್ನು ಪತ್ತೆ ಹಚ್ಚುವುದು ಹೇಗೆ ಮತ್ತು ವಿದ್ಯುತ್ ಸೋರಿಕೆಯಲ್ಲಿರುವ ಉಪಕರಣಗಳಿಂದಾಗುವ ಅಪಾಯದ ಬಗ್ಗೆ ತಿಳಿದಿರಬೇಕು.

3. ಅಗ್ನಿ ದುರಂತವಾದೊಡನೆ ಮೊದಲು ಯಾವ ಕ್ರಮಕೈಗೊಳ್ಳಬೇಕು. ಅಗ್ನಿಶಾಮಕ ಮತ್ತು ಆಂಬುಲೆನ್ಸ್‌ನ್ನು ಕರೆಯುವ ವಿಧಾನ; ಮನೆ ಮತ್ತು ಕೇಂದ್ರಸ್ಥಾನದ ಹತ್ತಿರದ ಸಹಾಯಕ ಕರೆಗಂಟೆ ಪರಿಸ್ಥಿತಿಯ ಬಗ್ಗೆ ಅರಿವು; ಸಹಾಯ ಬರುವವರೆಗಿನ ಅವಧಿಯಲ್ಲಿ ಏನು ಮಾಡಬೇಕು ಎಂದು ಅರಿತಿರಬೇಕು.

4. ಎರಡು ವಿಧದ ಅಗ್ನಿ ನಂದಿಸುವ ಸಲಕರಣೆಗಳು, ಬಕೆಟ್ ಮತ್ತು ಬಕೆಟ್ ಚೈನ್‌ಗಳನ್ನು ಉಪಯೋಗಿಸುವುದನ್ನು ತಿಳಿದಿರಬೇಕು.

5. ಮುಂದಿನ ವಿಧಗಳ ಬೆಂಕಿಗಳನ್ನು ಹೇಗೆ ಆರಿಸುವುದೆಂಬುದನ್ನು ತಿಳಿದಿರಬೇಕು: ಬಟ್ಟೆ, ಪೆಟ್ರೋಲ್ ಮತ್ತು ಸ್ಪಿರಿಟ್, ಚಿಮಣಿ, ಮೋಟಾರ್ ಕಾರ್, ವಿದ್ಯುತ್ ಹುಲ್ಲು ಮತ್ತು ಹುಲ್ಲುಮೆದೆ.

6. ಲಾಠಿಗಳನ್ನು ಉಪಯೋಗಿಸಿಕೊಂಡು ಜನರ ಗುಂಪನ್ನು ಹತೋಟಿಯಲ್ಲಿಡುವುದು, ಗಾಯಾಳುಗಳನ್ನು ಸಾಗಿಸುವುದು, ಕುರ್ಚಿಗಂಟು ಮುಂತಾದ ಸುಧಾರಿತ ರೀತಿಯಲ್ಲಿ ಹಗ್ಗಗಳಿಂದ ರೋಗಿಗಳನ್ನು ಇಳಿಸುವುದು, ಜಿಗಿಯುವ ದುಪ್ಪಟಿ, ಹೊಗೆಯಲ್ಲಿ ತೆವಳಿ ಬರುವುದು, ಜ್ಞಾನತಪ್ಪಿದ ವ್ಯಕ್ತಿಯನ್ನು ಎಳೆದು ತರುವುದು, ಗಾಬರಿಯನ್ನು ತಡೆಯುವುದು ಹಾಗು ಜಾನುವಾರನ್ನು ರಕ್ಷಿಸುವುದು ತಿಳಿದಿರಬೇಕು.

7. ಸಾಧ್ಯವಾದಲ್ಲಿ ಹೋಸ್, ಹೈಡ್ರೆಂಟ್‌ಗಳನ್ನು ಉಪಯೋಗಿಸುವುದು, ವಿಶೇಷ ಸೂಚನೆಯ ಪ್ರಕಾರ ತಪ್ಪಿಸಿಕೊಳ್ಳಲು ಸಾಧ್ಯತೆಯಿದ್ದರೆ ಅದನ್ನು ಬಳಸಿಕೊಳ್ಳುವುದು, ತಿಳಿದಿರಬೇಕು.

**ಸೂಚನೆ :** ಜಿಲ್ಲಾ ಆಯುಕ್ತರ ಅನುಮತಿಯೊಂದಿಗೆ ಗ್ರಾಮೀಣ ಸ್ಕೌಟ್‌ಗಳು ಯಾವ ಪರೀಕ್ಷಾಂಶಗಳನ್ನು ಕೈಗೊಳ್ಳಲು ಸಾಧ್ಯವಿಲ್ಲವೋ ಅಂತಹವನ್ನು ಹೊರತು ಪಡಿಸಬಹುದು.

**42. ಪುಷ್ಪತಜ್ಞ (Florist)**



1. ತನ್ನ ನೆರೆಹೊರೆಯಲ್ಲಿ (ನಗರದ ಸ್ಕೌಟ್‌ಗಳು ತಾವೇ ಆರಿಸಿಕೊಂಡ ಸೂಕ್ತ ಪ್ರದೇಶದಲ್ಲಿ) ಸಾಮಾನ್ಯವಾಗಿ ಕಂಡುಬರುವ ಕಾಡುಹೂಗಳು, ಬೀಜಗಳು, ಹುಲ್ಲು ಇವುಗಳ ಬಗ್ಗೆ ತಿಳಿದಿರಬೇಕು. ಅಲ್ಲದೆ ಅವುಗಳು ಕಂಡು ಬರುವ ಸ್ಥಳ ಮತ್ತು ಅವುಗಳ ಸ್ವಭಾವಗಳ ಬಗ್ಗೆ ತಿಳಿದಿರಬೇಕು.
2. ಬೀಜ ಪ್ರಸಾರದ ವಿವಿಧ ವಿಧಾನಗಳ ಅರಿವಿರಬೇಕು.
3. ಕೆಲವು ಸ್ಥಳೀಯ ಹೆಸರುಗಳ ಪರಿಚಯವಿರಬೇಕು. 12 ಹೂ–ಗಿಡಗಳ ಉಪಯೋಗ ಮತ್ತು ಗುಣಲಕ್ಷಣಗಳನ್ನು ತಿಳಿದಿರಬೇಕು.
4. ಒಂದು ಕೊಠಡಿಯ ಮೇಜಿನ ಮೇಲೆ / ಗೋಡೆಯ ಮೇಲೆ, ಹೂಗಳು, ಝರಿ ಗಿಡಗಳು (ಫರ್ನ್ಸ್), ಎಲೆಗಳು ಇತ್ಯಾದಿಗಳನ್ನು ಪರೀಕ್ಷಕರ ಸಮ್ಮುಖದಲ್ಲಿ ಜೋಡಿಸಬೇಕು.
5. ಹೂಗಳನ್ನು ಸಂರಕ್ಷಿಸುವ ಮತ್ತು ಸಾಗಿಸುವ ವಿಧಾನಗಳನ್ನು ತಿಳಿದಿರಬೇಕು.

**43. ಜಾನಪದ ನರ್ತಕ (Folk Dancer)**



1. ಜಾನಪದ ನೃತ್ಯದ ಸಾಂಸ್ಕೃತಿಕ ಹಿನ್ನೆಲೆ ತಿಳಿದಿರಬೇಕು ಮತ್ತು ನೃತ್ಯವನ್ನು ಸರಿಯಾಗಿ ಮಾಡಬೇಕು.
2. ಎರಡು ಇತರ ರಾಜ್ಯಗಳ ಜಾನಪದ ನೃತ್ಯಗಳು ಹಾಗೂ ಎರಡು ಗುಂಪು ನೃತ್ಯಗಳೂ ಒಳಗೊಂಡಂತೆ, ನಾಲ್ಕು ನೃತ್ಯಗಳನ್ನು ಮಾಡಬೇಕು.
3. ಗ್ರಾಮೀಣ ಅಥವಾ ಕೊಳಚೆ ಪ್ರದೇಶದಲ್ಲಿ ಕನಿಷ್ಠ ಒಂದು ಜಾನಪದ ನೃತ್ಯವನ್ನು ಮಾಡಬೇಕು.

**44. ಅರಣ್ಯ ತಜ್ಞ (Forester)**

1. ಅರಣ್ಯದ ಪ್ರಾಥಮಿಕ ಕಲ್ಪನೆ, ಭಾರತದಲ್ಲಿ ಅದರ ವ್ಯಾಪ್ತಿ ಹಾಗೂ ಪ್ರಸ್ತುತ

ಸಂದರ್ಭದಲ್ಲಿ ಅದರ ಪ್ರಾಮುಖ್ಯತೆಯ ಅರಿವಿರಬೇಕು.



2. ಸಸಿಗಳನ್ನು ಬೆಳೆಸುವ ಕ್ರಮವನ್ನು ಪ್ರಾಯೋಗಿಕವಾಗಿ ಮಾಡಿ ತಿಳಿದಿರಬೇಕು. ನರ್ಸರಿ ಬೆಡ್ ಮಾಡುವುದು, ಪ್ಲಾಸ್ಟಿಕ್ ಚೀಲಗಳಲ್ಲಿ ಬೀಜ ಬಿತ್ತುವುದು ಇತ್ಯಾದಿಗಳನ್ನು ಮಾಡಲು ತಿಳಿದಿರಬೇಕು. ನಾಟಿ ಮಾಡುವ ಕಾಲ, ಒತ್ತಾಗಿರುವ ಗಿಡಗಳನ್ನು ತೆಗೆಯುವ ಕಾಲ, ಮರಗಳನ್ನು ಕಡಿದು ತುಂಡುಮಾಡುವ ಕಾಲಗಳ ಬಗ್ಗೆ ಅರಿವಿರಬೇಕು

3. ಮರಗಳ ಜೀವನ ಮತ್ತು ಸಂತಾನೋತ್ಪತ್ತಿಯ ಕ್ರಮಗಳನ್ನೂ ತಿಳಿದಿರಬೇಕು. ಮರಗಳಿಗೆ ಗಾಯಗಳುಂಟಾಗುವ ಬಗೆ, ಕಾರಣಗಳು ಮತ್ತು ಅವುಗಳ ನಿರ್ವಹಣೆ ಬಗ್ಗೆ ಅರಿತಿರಬೇಕು.

4. ಸುತ್ತಲಿನ ಪ್ರದೇಶದ 12 ವಿವಿಧ ಜಾತಿಯ ಮರಗಳ ಬೆಳವಣಿಗೆ ಮತ್ತು ಅಭಿವೃದ್ಧಿ ಬಗ್ಗೆ ತಿಳಿದಿರಬೇಕು. ಯಾವುದೇ ಋತುವಿನಲ್ಲಿ ಅವುಗಳನ್ನು ದೂರದಿಂದ ಗುರುತಿಸಲು ಸಮರ್ಥನಿರಬೇಕು. ಅವುಗಳ ತೊಗಟೆ, ಎಲೆ, ಹೂವು ಮತ್ತು ಹಣ್ಣುಗಳ ಸಹಾಯದಿಂದಲೂ ಗುರುತಿಸುವಂತಿರಬೇಕು. ಮರಗಳಿಂದಾಗುವ ಸೌದೆ, ಪಶು ಆಹಾರ, ಹಣ್ಣು, ಔಷಧಿ, ಮರಮುಟ್ಟು ಮತ್ತು ಇತ್ಯಾದಿ ಮುಖ್ಯ ಉಪಯೋಗಗಳನ್ನು ತಿಳಿದಿರಬೇಕು.

5. ಕಾಡ್ಗಿಚ್ಚು, ಅದರ ಕಾರಣ ಹಾಗೂ ನಿವಾರಣೆಯ ಬಗ್ಗೆ ತಿಳಿದಿರಬೇಕು.

6. ತೋಟವನ್ನು ಬೆಳೆಸಿ ಆರಂಭದಿಂದ 1 ವರ್ಷಕಾಲ ನಿರ್ವಹಿಸ ಬೇಕು.

7. ಸಮುದಾಯ ಅರಣ್ಯ, ಕೃಷಿಭೂಮಿ ಅರಣ್ಯ, ರಸ್ತೆ ಬದಿ ತೋಪು, ಹೆದ್ದಾರಿ ತೋಪು ಇವುಗಳ ಪ್ರಾಥಮಿಕ ಅರಿವಿರಬೇಕು. ಸಮುದಾಯ ಅರಣ್ಯದಲ್ಲಿ ಬಳಸುವ 10 ಜಾತಿಯ ಮರಗಳ ಅರಿವಿರಬೇಕು.

8. ಭೂ ಸವಕಳಿಯ ಪ್ರಾಯೋಗಿಕ ಜ್ಞಾನ, ಅದರ ಕಾರಣಗಳು ಮತ್ತು ಭೂ ಸವಕಳಿಯನ್ನು ತಡೆಯುವ ಬಗ್ಗೆ ಅರಿವಿರಬೇಕು.

9. ನಿರ್ದಿಷ್ಟ ಮರದಲ್ಲಿ ಮರಮುಟ್ಟುಗಳಿಗಾಗಿ ಪ್ರಯೋಜನಕ್ಕೆ ಬರುವ ಪ್ರಮಾಣವನ್ನು ಲೆಕ್ಕಾಚಾರ ಮಾಡಬೇಕು.

## 45. ಪ್ರಾಣಿಮಿತ್ರ (Friend to animals)

1. ಕುದುರೆ ಅಥವಾ ಕತ್ತೆ, ಹಸು ಅಥವಾ ಎಮ್ಮೆ, ಕುರಿ ಅಥವಾ ಮೇಕೆ, ಬೆಕ್ಕು ಅಥವಾ ನಾಯಿ, ಎತ್ತು ಅಥವಾ ಒಂಟೆ ಇವುಗಳ ಸ್ವಭಾವ, ಆಹಾರ, ಮತ್ತು ಅವುಗಳ ಸ್ವಾಸ್ಥ್ಯಕ್ಕೆ ಅವಶ್ಯವಾದ ಎಲ್ಲಾ ವಿಷಯಗಳ ಅರಿವಿರಬೇಕು.

ಅವುಗಳಿಗುಂಟುಮಾಡುವ ಯಾವುದೇ ಬಗೆಯ ಕ್ರೌರ್ಯ ಅಥವಾ ದುರುಪಯೋಗಗಳನ್ನು ಗುರುತಿಸಬೇಕು.



2. ಆ ಪ್ರಾಣಿಗಳಿಗೆ ಸಾಮಾನ್ಯವಾಗಿ ತಗಲುವ ಸಣ್ಣ ಪ್ರಮಾಣದ ಖಾಯಿಲೆಗಳು ಹಾಗೂ ಅವುಗಳಿಗೆ ಸರಳ ಪರಿಹಾರಗಳನ್ನು ತಿಳಿದಿರಬೇಕು.
3. ಮುದ್ದಿಗಾಗಿ ಅಥವಾ ಮನೆಯ ಉಪಯೋಗಕ್ಕಾಗಿ ಸಾಕುವ ಪಕ್ಷಿಗಳು, ಕೀಟಗಳು ಮತ್ತು ಸರೀಸೃಪಗಳ ಕಾಳಜಿವಹಿಸಲು ತಿಳಿದಿರಬೇಕು. ಒಂದು ಮುದ್ದಿನ ಪ್ರಾಣಿಯನ್ನು ಕನಿಷ್ಠ 12 ತಿಂಗಳಕಾಲ ಸ್ವಸ್ಥವಾಗಿಯೂ ಸುಖವಾಗಿಯೂ ಇರುವಂತೆ ಸಾಕಬೇಕು.
4. ಪ್ರಾಣಿಗಳಿಗೆ ಅಪಘಾತವಾದಾಗ, ಏನು ಮಾಡಬೇಕೆಂಬುದರ ಅರಿವಿರಬೇಕು. ಅವುಗಳ ರಕ್ಷಣೆಗಾಗಿ ಇರುವ ಕಾನೂನು ಹಾಗೂ ಈ ದಿಸೆಯಲ್ಲಿ ಪೋಲೀಸರ ಅಧಿಕಾರದ ಬಗ್ಗೆ ಅರಿವಿರಬೇಕು.
5. ಹತ್ತಿರದ 'ಪ್ರಾಣಿದಯಾಸಂಘ' (SPCA) ಇದ್ದರೆ ಅದರ ವಿಳಾಸವನ್ನು ತಿಳಿದಿರಬೇಕು.

**46. ಕ್ರೀಡಾ ನಾಯಕ (Games Leader)**

1. ಈ ಕೆಳಗಿನ ಪ್ರತಿಯೊಂದು ರೀತಿಯ ಆಟವನ್ನು ಆಡಲೂ ನಿರ್ದೇಶಿಸಲೂ ಸಮರ್ಥರಿರಬೇಕು. ಭಾರತೀಯ ಹೊರಾಂಗಣ ಆಟಗಳು, ಒಳಾಂಗಣ ಆಟಗಳು, ಟ್ಯಾಗ್ ಆಟಗಳು, ರಿಲೇ ಆಟಗಳು, ಇಂದ್ರಿಯ ತರಬೇತಿ ಆಟಗಳು, ಚಂಡಿನ ಆಟಗಳು, ವೈಯಕ್ತಿಕ ಸ್ಪರ್ಧೆಗಳು.



2. ತಂಡ ಸ್ಪರ್ಧೆಗಳ ಸಂಘಟನೆ ಮತ್ತು ಕ್ರಮಗಳ ಅರಿವಿರಬೇಕು.
3. ಆಟದಲ್ಲಿ ಶಿಸ್ತು ಮತ್ತು ಕ್ರೀಡಾ ಮನೋಭಾವದ ಮೌಲ್ಯವನ್ನು ತಿಳಿದಿರಬೇಕು.
4. ಮೊಹಲ್ಲಾ / ಗ್ರಾಮ / ಕೊಳಚೆ ಪ್ರದೇಶದ ಮಕ್ಕಳಿಗೆ ಎರಡು ತಿಂಗಳ ಕಾಲ ವಾರಾಂತ್ಯದಲ್ಲಿ ಆಟಗಳನ್ನು ಸಂಘಟಿಸಬೇಕು.

**47. ತೋಟಗಾರ (Gardener)**

1. 12 ಚ.ಮೀ.ಗೆ ಕಡಿಮೆ ಇಲ್ಲದ ವಿಸ್ತೀರ್ಣದ ಭೂಮಿಯನ್ನು ಅಗೆಯಬೇಕು. ಅದರಲ್ಲಿ ಆರು ಬಗೆಯ ತರಕಾರಿಗಳನ್ನು ನೆಟ್ಟು ಬೆಳೆಸಬೇಕು.

ಅಥವಾ



ಅಗೆಯಲು ಸಾಧ್ಯವಿಲ್ಲದ ನಗರ ಪ್ರದೇಶಗಳಲ್ಲಿ ಮಣ್ಣಿನ ಕುಂಡಗಳು ಅಥವಾ ಮರದ ಪೆಟ್ಟಿಗೆಗಳನ್ನು ಬಳಸಬಹುದು.

2. ಸಾಮಾನ್ಯ ತೋಟದಲ್ಲಿ ತೋರಿಸಿದ 12 ಗಿಡಗಳ ಹೆಸರು ತಿಳಿದಿರಬೇಕು. ಕತ್ತರಿಸುವುದು. ಕಣ್ಣು ಹಾಕುವುದು (Budding) ಕಸಿ ಮಾಡುವುದು, ಗೊಬ್ಬರ ಹಾಕುವುದು ಇವುಗಳ ಅರ್ಥವನ್ನು ತಿಳಿದಿರಬೇಕು. ಕತ್ತರಿಸುವುದು, ಕಣ್ಣು ಹಾಕುವುದು ಕಸಿ ಮಾಡುವುದು ಇವುಗಳಲ್ಲಿ ಒಂದನ್ನು ಪ್ರದರ್ಶಿಸಬೇಕು.

3. ಸಾರ್ವಜನಿಕ ಉದ್ಯಾನವನ ಅಥವಾ ನೆರೆಯವರ ಕೈ ತೋಟವನ್ನು ಆಯ್ದುಕೊಂಡು ಕನಿಷ್ಠ ಎರಡು ತಿಂಗಳ ಕಾಲ ಗಿಡಗಳನ್ನು ಆರೈಕೆ ಮಾಡಬೇಕು.

**ಸೂಚನೆ :** ನಗರ ಪ್ರದೇಶಗಳಲ್ಲಿ ಬದಲಾಗಿ ಮಾಳಿಗೆ ಕೈತೋಟ ಇರಬಹುದು.

**48. ಉತ್ತಮ ನೆರೆಹೊರೆವಾಸಿ (Good neighbour)**



1. ತನ್ನ ಸ್ವಂತ ರಾಜ್ಯವನ್ನು ಹೊರತುಪಡಿಸಿ, ಇತರೆ ಮೂರು ರಾಜ್ಯಗಳ ಇತಿಹಾಸ ಮತ್ತು ಭೂಗೋಳದ ಸಾಮಾನ್ಯ ಪರಿಚಯವನ್ನು ಹೊಂದಿರಬೇಕು.

ಹಿಂದಿನ 12 ತಿಂಗಳುಗಳಲ್ಲಿ ಇತರ ರಾಜ್ಯದ ಸ್ಕೌಟ್‌ನೊಂದಿಗೆ ಸಕ್ರಮವಾಗಿ ಪತ್ರವ್ಯವಹಾರ ನಡೆಸಿರಬೇಕು. ನೆರೆಯ ಮೂರು ರಾಜ್ಯಗಳ ಸ್ಕೌಟ್‌ಗಳೊಂದಿಗೆ ಮೂರು ಅನುಕ್ರಮ ರಾತ್ರಿ ಶಿಬಿರದಲ್ಲಿ ಭಾಗವಹಿಸಿರಬೇಕು. ಆ ರಾಜ್ಯಗಳ ಜನ, ಭಾಷೆ, ಸಂಸ್ಕೃತಿ ಇತ್ಯಾದಿಗಳ ಉತ್ತಮ ಪರಿಚಯ ಹೊಂದಿರಬೇಕು. ಪರೀಕ್ಷಕರಿಗೆ ಒಪ್ಪಿಗೆಯಾಗುವಂತೆ ದಾಖಲೆ ಪುಸ್ತಕಗಳನ್ನು ತಯಾರಿಸಬೇಕು.

**49. ಅಂಗಸಾಧಕ (Gymanst)**



ನುರಿತ ಅಂಗಸಾಧಕನಿಂದ ತರಬೇತಾದ ಹೊರತು ಸ್ಕೌಟ್‌ಗಳು ಈ ಪದಕವನ್ನು ಪಡೆಯುವಂತಿಲ್ಲ.

**ಅ. 16 ವರ್ಷಗಳಿಗೆ ಕಡಿಮೆ ವಯಸ್ಸು**

1. ನೇರ ನಿಲುವು, ನಡೆ ಮತ್ತು ಓಟ ಇರಬೇಕು.
2. ನಿಂತುಕೊಂಡು ಮಾಡುವ ವ್ಯಾಯಾಮಗಳ ಒಂದು ಸರಣಿಯನ್ನು ಆದೇಶಕ್ಕನುಸಾರವಾಗಿ ಮಾಡಬೇಕು.

3. ಉತ್ತಮ ಶೈಲಿಯಲ್ಲಿ 0.9 ಮೀ. (3 ಅ) ಎತ್ತರ ಜಿಗಿಯಬೇಕು.

4. ಉತ್ತಮ ನಿಲುವಿನೊಂದಿಗೆ ಸಮತೋಲನ ದಂಡದ (balancing form/ bar) ಕಿರಿದಾದ ಭಾಗದ ಮೇಲೆ ಹಿಂದಕ್ಕೂ ಮುಂದಕ್ಕೂ ನಡೆದಾಡುವ ಸಾಮರ್ಥ್ಯ ಹೊಂದಿರಬೇಕು

5. ಈ ಕೆಳಗಿನವುಗಳಲ್ಲಿ ಯಾವುದಾದರೂ ಮೂರನ್ನು ಉತ್ತಮ ಶೈಲಿಯಲ್ಲಿ ನಿರ್ವಹಿಸಬೇಕು.

   i. ಕನಿಷ್ಠ 4.2 ಮೀ. (14 ಅಡಿ) ಎತ್ತರದ ಹಗ್ಗವನ್ನು ಏರಬೇಕು.

   ii. ಎರಡು ಹಗ್ಗಗಳ ಮೂಲಕ ಹಾಗೂ ನಡುವೆ ಪಲ್ಟಿ ಹೊಡೆಯಬೇಕು.

   iii. ಗೋಡೆಯ ಆಧಾರ ಪಡೆದು ಕೈಗಳ ಮೇಲೆ ನಿಲ್ಲಬೇಕು.

   iv. ಗೋಡೆಯ ದಂಡಗಳ ಮೇಲೆ (Wal bars) ಅಥವಾ ಸುಧಾರಿತ ಉಪಕರಣಗಳ ಮೇಲೆ ತಲೆಕೆಳಗಾಗಿ ನೇತಾಡಬೇಕು.

   v. ದಂಡದ (Bars) ಮೇಲೆ ಪಾರ್ಶ್ವ ನಡಿಗೆ ಪ್ರದರ್ಶಿಸಬೇಕು.

6. ಈ ಕೆಳಗಿನವುಗಳಲ್ಲಿ ಯಾವುದಾದರೂ ಮೂರನ್ನು ಉತ್ತಮ ಶೈಲಿಯಲ್ಲಿ ನಿರ್ವಹಿಸಬೇಕು.

   i. ಎಡಗೈ ಮತ್ತು ಬಲಗೈಗಳಿಂದ ಬಂಡಿ ಚಕ್ರವನ್ನು ಮಾಡಬೇಕು.

   ii. ಪದ್ಮಾಸನದಲ್ಲಿ ಪಲ್ಟಿ ಹೊಡೆಯಬೇಕು.

   iii. ಹಿಮ್ಮುಖ ಕಪ್ಪೆ ಜಿಗಿತ

   iv. ಪೆಟ್ಟಿಗೆಯಲ್ಲಿ ತೋಳದಂತೆ ತೂರುವುದು (Wolf or Jack in the box)

   v. ಪೆಟ್ಟಿಗೆ ಅಥವಾ ತತ್ಸಮ ಎರಡು ವಸ್ತುಗಳ ಮೇಲೆ ಮೊಲ ಜಿಗಿತ.

**ಆ. 16 ವರ್ಷಗಳಿಗೆ ಮೇಲ್ಪಟ್ಟ ವಯಸ್ಸು**

1. ನೇರ ನಿಲುವು, ನಡೆ ಮತ್ತು ಓಟ ಇರಬೇಕು.

2. ಶಾಲೆಯಲ್ಲಿ ಅಥವಾ ಅಂಗೀಕೃತ ದೈಹಿಕ ತರಬೇತಿ ಕೇಂದ್ರದಲ್ಲಿ ಕನಿಷ್ಠ ವಾರಕ್ಕೊಮ್ಮೆ ಅಂಗಸಾಧನೆ ತರಗತಿಗೆ ಹಾಜರಿರಬೇಕು.

3. ಪರೀಕ್ಷಕರಿಂದ ಅಂಗೀಕೃತವಾದ ನಿಂತು ಮಾಡುವ ವ್ಯಾಯಾಮ ಸರಣಿಯನ್ನು ಮಾಡಬೇಕು.

4. ಈ ಕೆಳಗಿನ ಯಾವುದಾದರೂ ಎರಡನ್ನು ಸಮತೋಲನ ದಂಡದ ಕಿರಿದಾದ ಭಾಗದ ಮೇಲೆ, ಉತ್ತಮ ಶೈಲಿಯಲ್ಲಿ ಮಾಡಬೇಕು.

i. ಪ್ರತಿ ಹೆಜ್ಜೆಗೂ ಚೆಂಡನ್ನು ಎಸೆಯುತ್ತಾ, ಹಿಡಿಯುತ್ತಾ ಮುಂದಕ್ಕೆ ನಡೆಯಬೇಕು.

ii. ಯಾವುದೇ ಆಧಾರವಿಲ್ಲದೆ ಪಾರ್ಶ್ವ ನಡಿಗೆ ನಡೆಯಬೇಕು.

iii. ದಂಡದ ಮೇಲೆ ನಿಂತು, ಎಡಗೈ ಮತ್ತು ಬಲಗಾಲನ್ನು ಮೇಲೆತ್ತಿ, ಕೆಳಗಿಳಿಸಬೇಕು. ಮುಂದಕ್ಕೆ ಒಂದು ಹೆಜ್ಜೆ ಚಲಿಸಿ ಬಲಗೈ ಬಲಗಾಲಿನಿಂದ ಇದನ್ನು ಪುನರಾವರ್ತಿಸಬೇಕು.

iv. ಕುಕ್ಕುರುಗಾಲಿನಲ್ಲಿ ಕುಳಿತು ಮುಂದಕ್ಕೆ ಹೋಗಬೇಕು. ಮೂರು ಹೆಜ್ಜೆಗೊಮ್ಮೆ ಎದ್ದು ನಿಲ್ಲಬೇಕು. ಪುನಃ ಕುಳಿತು ಅದೇ ರೀತಿ ಮುಂದುವರೆಯಬೇಕು.

5. ಈ ಕೆಳಗಿನ ಗುಂಪುಗಳಲ್ಲಿ ಒಂದನ್ನು ಮಾಡಬೇಕು.

i. 4.8 ಮೀ (16 ಅಡಿ) ಎತ್ತರದ ಹಗ್ಗವನ್ನು ಏರಬೇಕು. ಆ ಎತ್ತರದಲ್ಲಿ ಒಂದು ದಂಡದ ಮೇಲೆ ಅಥವಾ ಗೋಡೆ ದಂಡಗಳ ಮೇಲೆ ಎರಡೂ ಕಡೆ ಕ್ರಮಿಸಬೇಕು ಅಥವಾ ದಂಡದ ಮೇಲೆ ಹಿಮ್ಮುಖವಾಗಿ ಕ್ರಮಿಸಬೇಕು.

ii. ಆಧಾರವಿಲ್ಲದೆ, ಕೈಗಳ ಮೇಲೆ ನಿಲ್ಲಬೇಕು, ಅಥವಾ ಸುಧಾರಿತ ದಂಡ ಉಪಕರಣದ ಮೇಲೆ ಪಲ್ಟಿ ಹೊಡೆಯಬೇಕು ಅಥವಾ ಎರಡು ಹಗ್ಗಗಳ ನಡುವೆ ಲಂಬವಾಗಿ ತಲೆಕೆಳಕಾಗಿ ನೇತಾಡಬೇಕು.

## 50. ಕರಕುಶಲಗಾರ (Handyman)



ಈ ಕೆಳಗಿನವುಗಳಲ್ಲಿ ಯಾವುದಾದರೂ ಹತ್ತು ಕೆಲಸಗಳನ್ನು ಮಾಡಬೇಕು. ಆ ಪೈಕಿ ಪರೀಕ್ಷಕರಿಂದ ಆಯ್ಕೆ ಮಾಡಲ್ಪಟ್ಟ ಕನಿಷ್ಠ ಮೂರನ್ನು ಪ್ರದರ್ಶಿಸಬೇಕು.

1. ಬಾಗಿಲು ಅಥವಾ ಅದೇ ರೀತಿಯ ವಸ್ತುವಿಗೆ ಬಣ್ಣ ಹಚ್ಚಬೇಕು.
2. ಗೋಡೆ ಅಥವಾ ಮೇಲು ಚಾವಣಿಗೆ ಸುಣ್ಣ ಬಳಿಯಬೇಕು ಅಥವಾ ಡಿಸ್ಟೆಂಪರ್ ಹಚ್ಚಬೇಕು.
3. ಗ್ಯಾಸ್ ದೀಪವನ್ನು ಸ್ವಚ್ಛಗೊಳಿಸಿ ಸರಿಪಡಿಸಬೇಕು. ಅದರ 'ಮ್ಯಾಂಟಲ್'ನ್ನು ಬದಲಿಸಬೇಕು.
4. ಕೊಳಾಯಿ ವಾಷರ್‌ನ್ನು ಬದಲಿಸಬೇಕು ಮತ್ತು 'ಬಾಲ್ ಕಾಕ್' ಅನ್ನು ಸರಿಪಡಿಸಬೇಕು.
5. ಚಿತ್ರಪಟಗಳನ್ನು ತೂಗುಹಾಕಬೇಕು ಮತ್ತು ಪರದೆ ಸಲಾಕೆಗಳನ್ನು ಬಂಧಿಸಬೇಕು.

6. ಕಿಟಕಿಯ ಪರದೆಗಳನ್ನು ಬಂಧಿಸಬೇಕು, ದುರಸ್ತಿ ಮಾಡಬೇಕು ಮತ್ತು ಸರಿಪಡಿಸಬೇಕು.
7. ನೆಲಗಂಬಳಿಯ ಧೂಳನ್ನು ಝಾಡಿಸಿ, ಪುನಃ ಹಾಸಬೇಕು.
8. ಪೀಠೋಪಕರಣಗಳನ್ನು, ಸೋಫಾ ಮುಂತಾದವುಗಳ ಮೇಲು ಹೊದಿಕೆಯನ್ನು, ಪಿಂಗಾಣಿ ವಸ್ತುಗಳನ್ನು ದುರಸ್ತಿಮಾಡಬೇಕು.
9. ಚಾಕುಗಳನ್ನು ಹರಿತ ಮಾಡಬೇಕು.
10. ಕಿಟಕಿ ಹೊಳಪುಗೊಳಿಸಬೇಕು.
11. ಸಂಚಯಕೋಶದ (Accumlator) ಬಗ್ಗೆ ಜಾಗ್ರತೆ ವಹಿಸಬೇಕು.
12. ಕೈ ಪಂಪನ್ನು ದುರಸ್ತಿ ಮಾಡಿ ಜೋಡಿಸಬೇಕು.
13. ಬಾಗಿಲಿನ ಬೀಗದಲ್ಲಿ ಸ್ಪ್ರಿಂಗ್‌ನ್ನು ಬದಲಿಸಬೇಕು
14. ನೀರಿನ ಕೊಳವೆ ಒಡೆದಾಗ ಅಥವಾ ಅನಿಲ ಸೋರಿಕೆ ಆದಾಗ ತಕ್ಷಣ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ತಿಳಿದಿರಬೇಕು.
15. ಚಿಮಣಿಯನ್ನು ದುರಸ್ತಿ ಮಾಡಿ ಜೋಡಿಸಬೇಕು
16. ಪ್ರತಿಬಂಧಿತ (ಕಸ ಕಟ್ಟಿಕೊಂಡಿರುವ) ಸಿಂಕ್‌ಗಳನ್ನು ಸ್ವಚ್ಛಗೊಳಿಸಬೇಕು.
17. ಹುಲ್ಲು ಗುಡಿಸಲಿನ ಛಾವಣಿಗೆ ಹುಲ್ಲು ಹೊದಿಸಬೇಕು.
18. ಗೋಡೆ ಅಥವಾ ನೆಲವನ್ನು ಮಣ್ಣಿನಿಂದ ಅಥವಾ ಸಿಮೆಂಟನಿಂದ ಗಿಲಾವು (plaster) ಮಾಡಬೇಕು.
19. ಕೆರೆ ಅಥವಾ ನದಿಗೆ ಹೋಗಲು, ಮರದ ದಿಮ್ಮಿಗಳಿಂದ ಮೆಟ್ಟಿಲುಗಳನ್ನು ಮಾಡಬೇಕು.
20. ನೂಲು ಅಥವಾ ನವಾರುಪಟ್ಟಿಯಿಂದ ಹಾಸಿಗೆ ಹೆಣೆಯಬೇಕು.
21. ಕೊಳವೆ ಬಾವಿಗಳ ಪಂಪನ್ನು ದುರಸ್ತಿ ಮಾಡಲು ತಿಳಿದಿರಬೇಕು.
22. ಜೋಲಿ ತಯಾರಿಸಬೇಕು.
23. ಬಾವಿಯ ಮೇಲ್ಭಾಗದ ಮರವನ್ನು (ದೂಲ) ದುರಸ್ತಿ ಗೊಳಿಸಬೇಕು.
24. ಒಣಹುಲ್ಲಿಗಾಗಿ ಪೆಟ್ಟಿಗೆ ತಯಾರಿಸಬೇಕು.
25. ಬಕೆಟ್‌ನ್ನು ದುರಸ್ತಿ ಮಾಡಬೇಕು.
26. ಮಡಕೆಗೆ ಬಣ್ಣ ಹಚ್ಚಬೇಕು.
27. ಪ್ರೆಷರ್ ಸ್ಟೌವ್, ಎಣ್ಣೆ ಸ್ಟೌವ್, ಗ್ಯಾಸ್ ಸ್ಟೌವ್‌ನ್ನು ನಿರ್ವಹಿಸಬೇಕು.
28. ಬೆತ್ತದ ಕುರ್ಚಿಯನ್ನು ದುರಸ್ತಿ ಮಾಡಬೇಕು.

29. ಪೀಠೋಪಕರಣ, ಎಣ್ಣೆ ಸ್ಟೌವ್, ಅನಿಲ ಸ್ಟೌವ್‌ಗಳನ್ನು ಪಾಲಿಷ್ ಮಾಡಬೇಕು.

30. ಬಿರುಕು ಬಿಟ್ಟಿರುವ ಅಥವಾ ದೋಷಪೂರಿತವಾದ ಗಿಲಾವನ್ನು ದುರಸ್ತಿ ಗೊಳಿಸಬೇಕು.

31. ಕಾರು, ಸ್ಕೂಟರ್, ಮೋಟರ್ ಸೈಕಲ್‌ಗಳನ್ನು ತೊಳೆದು ಒರೆಸಿ ಪಾಲಿಷ್ ಮಾಡಬೇಕು.

32. ಮಕ್ಕಳ ಆಟಿಕೆಗಳನ್ನು ದುರಸ್ತಿಗೊಳಿಸಬೇಕು.

33. ವಿದ್ಯುತ್ ಇಸ್ತ್ರಿಪೆಟ್ಟಿಗೆಯನ್ನು ದುರಸ್ತಿಗೊಳಿಸಬೇಕು.

**51. ಸ್ವಾಸ್ಥ್ಯ ಪರಿಪಾಲಕ (Healthyman)**



1. ಹೃದಯ, ಶ್ವಾಸಕೋಶ, ಚರ್ಮ, ಹಲ್ಲುಗಳು, ಪಾದಗಳು, ಹೊಟ್ಟೆ ಮತ್ತು ವಿಶೇಷ ಸಂವೇದನೆಯ ಅಂಗ (ಕಣ್ಣುಗಳು, ಕಿವಿಗಳು ಮತ್ತು ಮೂಗು)ಗಳ ಪ್ರಾಮುಖ್ಯತೆ ಅರಿತಿರಬೇಕು. ಅವುಗಳನ್ನು ಸುಸ್ಥಿತಿಯಲ್ಲಿಡುವುದು ಮತ್ತು ಅವುಗಳಿಗುಂಟಾಗಬಹುದಾದ ಪ್ರಮುಖ ತೊಂದರೆಗಳ ಬಗ್ಗೆ ವಹಿಸಬೇಕಾದ ಎಚ್ಚರಿಕೆಗಳ ಬಗ್ಗೆ ಅರಿತಿರಬೇಕು.

2. ತಿನ್ನುವುದು, ಕುಡಿಯುವುದು, ಉಸಿರಾಡುವುದು, ಮಲಗುವುದು, ಸ್ವಚ್ಛತೆ ಮತ್ತು ವ್ಯಾಯಾಮಗಳ ಬಗ್ಗೆ ಸಾಮಾನ್ಯ ನಿಯಮಗಳನ್ನು ತಿಳಿದಿರಬೇಕು. ಕನಿಷ್ಠ 12 ತಿಂಗಳಕಾಲ ಈ ನಿಯಮಗಳ ಅರಿವಿನ ಬಗ್ಗೆ ಪುರಾವೆ ಕೊಡಬೇಕು.

3. ಸ್ವಚ್ಛ ಗಾಳಿಯ ಪ್ರಾಮುಖ್ಯತೆಯನ್ನು ಅರಿತಿರಬೇಕು ಮತ್ತು ಕೊಠಡಿಯಲ್ಲಿ ಮುಕ್ತ ವಾಯುಸಂಚಾರವಿರುವಂತೆ ಮಾಡಬೇಕು.

4. ಹೊಗೆಸೊಪ್ಪು, ಮಧ್ಯಪಾನ, ಅಫೀಮು ಮತ್ತು ಇತರೆ ಮಾದಕ ದ್ರವ್ಯಗಳ ಅಪಾಯದ ಬಗ್ಗೆ ಅರಿವಿರಬೇಕು. ದೇಹವನ್ನು ಅತಿಯಾಗಿ ಪ್ರಯಾಸ ಪಡಿಸುವುದರಿಂದುಂಟಾಗುವ ಅಪಾಯ ಮತ್ತು ಒಂದೇ ರೀತಿಯ ದೇಹಾಲಸ್ಯವನ್ನುಂಟು ಮಾಡುವ, ನಿರಂತರವಾದ ವ್ಯಾಯಾಮದಿಂದಾಗುವ ಹಾನಿ ಇವುಗಳ ಅರಿವಿರಬೇಕು.

5. ಶರೀರದ ಎಲ್ಲಾ ಭಾಗಗಳಿಗೆ ಸೂಕ್ತವಾದ ವ್ಯಾಯಾಮಗಳನ್ನು ಒಂದು ಪಟಾಲಂಗೆ ಕಲಿಸಬೇಕು ಹಾಗೂ ಪ್ರತಿ ವ್ಯಾಯಾಮಕ್ಕೂ ಕಾರಣಗಳನ್ನು ನೀಡಬೇಕು.

**52. ಮೂಲಿಕಾ ತಜ್ಞ (Herbalist)**



1. 12 ಔಷಧಿಯ ಸಸ್ಯಗಳು ಹಾಗೂ 12 ಅಡಿಗೆಗೆ ಬಳಸುವ ಸಸ್ಯಗಳ ಸಂಗ್ರಹ ಮಾಡಬೇಕು. (ಒಂದು ಪುಸ್ತಕದಲ್ಲಿ ಒಪ್ಪವಾಗಿ ಅಂಟಿಸಿರಬೇಕು). ಸಂಗ್ರಹದಲ್ಲಿ ಎಲೆಗಳು, ಬೇರುಗಳು, ಮತ್ತು ತೊಗಟೆಗಳು ಇರಬೇಕು. ಅವುಗಳು ದೊರಕುವ ಸ್ಥಳ ಮತ್ತು ಅವುಗಳ ನಿರ್ದಿಷ್ಟ ಉಪಯೋಗಗಳನ್ನು ತಿಳಿದಿರಬೇಕು. ಹಾಗೂ ಅವುಗಳನ್ನು ತಕ್ಷಣ ಗುರುತಿಸಬೇಕು.
2. 6 ವಿವಿಧ ಗಿಡಮೂಲಿಕೆಗಳ ಔಷಧೀಯ ಗುಣಗಳನ್ನು ತಿಳಿದಿರಬೇಕು.
3. ಒಂದು ಮೂಲಿಕಾವನವನ್ನು ರಚಿಸಿ 3 ತಿಂಗಳಕಾಲ ಅದನ್ನು ನಿರ್ವಹಿಸಬೇಕು.

**53. ಪರಂಪರೆ (Heritage)**



ಈ ಹಂತದಲ್ಲಿ ಸ್ಕೌಟ್ ತಾನು ವಾಸಿಸುತ್ತಿರುವ ರಾಜ್ಯದ ಬಗ್ಗೆ ವಿಶೇಷ ಆಸಕ್ತಿ ವಹಿಸಬೇಕು ಮತ್ತು ಭಾರತದ ವೈವಿಧ್ಯವೂ ಶ್ರೀಮಂತವೂ ಆದ ಪರಂಪರೆಯ ಬಗ್ಗೆ ರಾಷ್ಟ್ರೀಯ ಮುನ್ನೋಟವಿರಬೇಕು.

ಈ ಕೆಳಗಿನ ಅಂಶಗಳ ಬಗ್ಗೆ ನಿದರ್ಶನ ಸಹಿತ ಮಾಹಿತಿಯನ್ನೊಳಗೊಂಡ ಪುಸ್ತಕವನ್ನು ತಯಾರಿಸಬೇಕು.

1. **ಪ್ರಕೃತಿ, ಪರಂಪರೆ ಮತ್ತು ಸಂಸ್ಕೃತಿ:** ತಮ್ಮ ರಾಜ್ಯದ ಬಗೆಗಿನ ಹಾಡು, ಪದ್ಯ, ಒಗಟು, ಗಾದೆ, ಸಣ್ಣ ಕಥೆ ಇವುಗಳನ್ನು ಸಂಗ್ರಹಿಸಬೇಕು. ರಾಷ್ಟ್ರೀಯ ಪರಂಪರೆ ಹಾಗೂ ರಾಜ್ಯ ಮತ್ತು ದೇಶದ ವಿಶಿಷ್ಟ ಪರಂಪರೆಯ ಬಗ್ಗೆ ತಿಳುವಳಿಕೆಯಿರಬೇಕು.
   - ಋತುಗಳು ಮತ್ತು ಹಬ್ಬಗಳು ಅವುಗಳ ಅರ್ಥ ಮತ್ತು ಮಹತ್ವ
   - ಆಯಾ ರಾಜ್ಯದಲ್ಲಿ ವಾಸಿಸುವ ವಿವಿಧ ಸಮುದಾಯ ಹಾಗು ಬುಡಕಟ್ಟು ಜನರು.
   - ತನ್ನ ಸ್ಥಳದ ಭೌತಿಕ ಪರಿಸರ (ಪ್ರಸಿದ್ಧ ಬೆಟ್ಟಗಳು, ನದಿಗಳು, ಇತ್ಯಾದಿ).
   - ತನ್ನ ರಾಜ್ಯದ ಸಾಮಾನ್ಯ ಮರಗಳು
   - ಸಾಮಾನ್ಯವಾಗಿ ಕಾಣಬರುವ ಸಸ್ಯಗಳು ಮತ್ತು ಅವುಗಳ ಉಪಯೋಗಗಳು.

- ಸಾಮಾನ್ಯ ಪಕ್ಷಿಗಳು
- ಆಯಾ ಪ್ರದೇಶದ ಪ್ರಾಣಿ ಹಾಗು ಸಸ್ಯ ಸಂಪತ್ತು.

2. **ಭಾರತದ ಮತ್ತು ತಮ್ಮ ರಾಜ್ಯದ ಕಲೆ**
   - ಪ್ರಮುಖ ಪಾರಂಪರಿಕ ಕಟ್ಟಡಗಳು
   - ಪೂಜಾ ಸ್ಥಳಗಳು
   - ಸಂಗೀತ
   - ಸಂಗೀತ ವಾದ್ಯಗಳು
   - ನೃತ್ಯಗಳು
   - ನಾಟಕ ಪ್ರಕಾರಗಳು
   - ತಮ್ಮ ನಗರದಲ್ಲಿ ಕಾಣಬರುವ ಬೊಂಬೆಯಾಟ ಸಾಹಿತ್ಯ, ವಿಖ್ಯಾತ ಬರಹಗಾರರು, ಕವಿಗಳು.
   - ಆಹಾರ, ಉಡುಪುಗಳು ಅಂದು ಮತ್ತು ಇಂದು

3. **ಪ್ರಾಯೋಗಿಕ ಕೆಲಸ**

   ಅ. ಸಮೀಪದ ಸ್ಮಾರಕಗಳು, ವಸ್ತುಸಂಗ್ರಹಾಲಯ ಇವುಗಳಿಗೆ ಭೇಟಿ ನೀಡಬೇಕು. ಮತ್ತು ದಾಖಲಿಸಬೇಕು.

   ಆ. ತನ್ನ ಪಟ್ಟಣದ ಅಥವಾ ಗ್ರಾಮದ ನಿದರ್ಶನ ಸಹಿತವಾದ ಈ ಕೆಳಗಿನ ಯಾವುದಾದರೂ ಮೂರು ಅಂಶಗಳ ಬಗ್ಗೆ ಚಾರಿತ್ರಿಕ ದಾಖಲೆ ಇಡಬೇಕು.

   i. ತನ್ನ ಜಿಲ್ಲೆಯ/ನಗರದ ವಸ್ತುಸಂಗ್ರಹಾಲಯುಗಳು, ಕಲಾವಸ್ತು ಪ್ರದರ್ಶನ ಮಂದಿರಗಳು ಮತ್ತು ಸಾಂಸ್ಕೃತಿಕ ಕೇಂದ್ರಗಳ ಪಟ್ಟಿ ತಯಾರಿಸಬೇಕು.

   ii. ನೆರೆಯಲ್ಲಿರುವ ಸ್ಮಾರಕಗಳು ಮತ್ತು ಚಾರಿತ್ರಿಕ ನಿವೇಶನ–ಗಳನ್ನು ಭೇಟಿಮಾಡಿ, ಸಮಸ್ಯೆಗಳನ್ನು ಗುರುತಿಸಿಕೊಂಡು ಅದರ ಮಂಡನೆಗೆ ನೀಡಬೇಕು.

   iii. ತನ್ನದೇ ನೆರೆ ಪ್ರದೇಶದ ಸ್ಮಾರಕ ಅಥವಾ ವಿಶಿಷ್ಟವಾದ ಸ್ವಾಭಾವಿಕ ಲಕ್ಷಣಗಳಾದ ಧಾರ್ಮಿಕ ಸ್ಥಳಗಳು, ಕೆರೆ, ಅಥವಾ ದೇವಾಲಯ ಮುಂತಾದುವನ್ನು ಆಯ್ದುಕೊಂಡು ಒಂದು ತಿಂಗಳಕಾಲ ಉಸ್ತುವಾರಿ ವಹಿಸಿ ಅದನ್ನು ಸ್ವಚ್ಛವಾಗಿಡಲು ಆಸಕ್ತಿ ವಹಿಸಬೇಕು.

iv. ಸ್ಥಳೀಯ ಶಾಲೆ ಮತ್ತು ಸಮುದಾಯಕ್ಕೆ ಸ್ಮಾರಕಗಳ ವಿಷಯ -ದಲ್ಲಿ ವಿವರಣಕಾರ(guide)ರಾಗಿರಲು ಕಲಿಯಬೇಕು.

v. ಭಾರತೀಯ ಸಂಸ್ಕೃತಿ, ಕಲೆ ಮತ್ತು ಕಟ್ಟಡಗಳನ್ನು ಜೀರ್ಣೋದ್ಧಾರ ಮಾಡುವ ಮತ್ತು ನಿರ್ವಹಿಸುವ ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳ ಬಗ್ಗೆ ತಿಳಿದಿರಬೇಕು.

**54. ಚಾರಣಿಗ (Hiker)**



1. 160 ಕಿ.ಮೀ. (100 ಮೈಲಿ) ದೂರದ ವ್ಯವಸ್ಥಿತ (Regular) ನಿರಂತರ ಚಾರಣವನ್ನು ಕೈಗೊಳ್ಳಬೇಕು ಅಥವಾ ಪ್ರತಿಬಾರಿಯೂ ವಿವಿಧ ರಸ್ತೆಗಳ ಮೂಲಕ 4 ಚಾರಣಗಳನ್ನು ಒಂದು ಚಾರಣಕ್ಕೆ 40 ಕಿ.ಮೀ. (25 ಮೈಲಿ)ಗಳಂತೆ ಕೈಗೊಳ್ಳಿ ಹಾಗೂ ಚಾರಣಗಳ ವರದಿಯನ್ನು ಒಪ್ಪಿಸಬೇಕು. ಕಾಲ್ನಡಿಗೆಯಲ್ಲಾಗಲಿ ಅಥವಾ ಸೈಕಲ್‌ನಲ್ಲಾಗಲಿ ಚಾರಣವನ್ನು ಕೈಗೊಳ್ಳಬಹುದು. ಹೇಗಾದರಾಗಲಿ ಅರ್ಧ ದೂರವನ್ನು ಕಾಲ್ನಡಿಗೆಯಲ್ಲಿಯೇ ಪೂರೈಸಬೇಕು.

2. ಎ. ನಡೆಯುವಾಗ ಕಾಲುಗಳನ್ನು ಹೇಗೆ ರಕ್ಷಿಸಿಕೊಳ್ಳಬೇಕು?

   ಬಿ. ಬೊಬ್ಬೆಗಳು ಬರದಂತೆ ಹೇಗೆ ರಕ್ಷಿಸಿಕೊಳ್ಳಬೇಕು?

   ಸಿ. ಬೊಬ್ಬೆಗಳು ಬಂದರೆ ಹೇಗೆ ಉಪಚರಿಸಬೇಕು?

   ಡಿ. ಚಾರಣಕ್ಕೆ ಉತ್ತಮವಾಗಿ ಹೊಂದಿಕೊಳ್ಳುವ ವಿವಿಧ ಪಾದರಕ್ಷೆಗಳು ಹೇಗಿರಬೇಕು?

   ಇ. ಒದ್ದೆಯಾದರೆ ಏನು ಮಾಡಬೇಕು ಎಂಬೀ ವಿಷಯಗಳ ಬಗ್ಗೆ ತಿಳಿದಿರಬೇಕು.

3. ಚಾರಣದ ಸಮಯದಲ್ಲಿ ಅಗತ್ಯ ಬೀಳುವ ಸಾಮಾನ್ಯ ಔಷಧಿಗಳ ಬಗ್ಗೆ ತಿಳಿದಿರಬೇಕು. ಅದರ ಅಳತೆ ಮತ್ತು ಉಪಯೋಗಿಸುವ ರೀತಿ ಸಹ ತಿಳಿದಿರಬೇಕು.

4. ಹೆಗಲ ಮೇಲೆ ಹೊತ್ತುಹೋಗುವಂತೆ ಸಾಮಗ್ರಿಗಳನ್ನು ಜೋಡಿಸಿ ಕೊಳ್ಳಲು ತಿಳಿದಿರಬೇಕು.

5. ಗುಡಾರ, ನಿದ್ರಿಸುವ ಚೀಲ, ಶಿಬಿರಾಗ್ನಿಯ ಹೊದಿಕೆ ಹೆಗಲ ಚೀಲ, ಬೇಕು ಚೀಲ ಅಥವಾ ಇತರ ದಿನೋಪಯೋಗಿ ಆಹಾರ ಅಥವಾ ಶೌಚ ವಸ್ತುಗಳನ್ನು ಒಯ್ಯಬಹುದಾದ ಚಾರಣ ಚೀಲ ಇವುಗಳಲ್ಲೊಂದನ್ನು ತಯಾರಿಸಬೇಕು.

## 55. ಅಸ್ಪತ್ರೆ ಮೇಲ್ವಿಚಾರಕ (Hospital man)



ಈ ಕೆಳಕಂಡ ವಿಷಯಗಳಲ್ಲಿ ಸಾಮಾನ್ಯ ತಿಳುವಳಿಕೆ ಇರಬೇಕು.

1. ರೋಗಿಗಳ ಕೊಠಡಿಯನ್ನು ಆಯ್ದುಕೊಳ್ಳಲು, ಸಿದ್ಧಪಡಿಸಲು ಮತ್ತು ಒಳ್ಳೆಯ ಗಾಳಿ ಬೆಳಕು ಇರುವಂತೆ ನೋಡಿಕೊಳ್ಳಲು ತಿಳಿದಿರಬೇಕು.

2. ರೋಗಿಯನ್ನು ಒದ್ದೆಬಟ್ಟೆಯಿಂದ ಒರೆಸಲು ಬರಬೇಕು. ಔಷಧಿ ಕೊಡಲು ತಿಳಿದಿರಬೇಕು, ರೋಗಿಯ ಉಸಿರಾಟ, ನಾಡಿಮಿಡಿತ ಮತ್ತು ಉಷ್ಣತೆಯನ್ನು ಓದಿ ಬರೆಯಲು ಗೊತ್ತಿರಬೇಕು.

3. ಅಶಕ್ತರಿಗೆ ಆಹಾರ ತಯಾಗಿಸಲು ಬರಬೇಕು. ಶಾಖಕೊಡಲು ತಿಳಿದಿರಬೇಕು. ಹಾಸಿಗೆಯನ್ನು ಸರಿಪಡಿಸುವುದು, ರೋಗಿಗೆ ಹುಣ್ಣಾಗದಂತೆ ನೋಡಿಕೊಳ್ಳುವುದು ಮತ್ತು ವೃದ್ಧರು ಹಾಗೂ ಬಲಹೀನರಿಗೆ ಸಹಾಯ ಮಾಡಲು ತಿಳಿದಿರಬೇಕು.

4. ಕೈ, ಮೊಳಕಾಲು ಮತ್ತು ಪಾದಕ್ಕೆ ಸುರುಳಿ ಬ್ಯಾಂಡೇಜ್‌ನ್ನು ಸುತ್ತುವ ಬಗ್ಗೆ ತಿಳಿದಿರಬೇಕು. ಡ್ರೆಸ್ಸಿಂಗ್ ಮಾಡಲು ಉಪಯೋಗಿಸುವ ವಸ್ತುಗಳ ಬಗ್ಗೆ ಅರಿತಿರಬೇಕು.

## 56. ದುಭಾಷಿ (Interprenter)



1. ಪರೀಕ್ಷಕರು ಕೊಟ್ಟ ಒಂದು ವಿಷಯದ ಬಗ್ಗೆ ಸಂಭಾಷಣೆ ನಡೆಸಬೇಕು ಮತ್ತು ಒಂದು ಸರಳ ಪತ್ರ ಬರೆಯಬೇಕು. ತನ್ನ ಮಾತೃಭಾಷೆಯಲ್ಲದ ಎರಡು ಇತರ ಭಾಷೆಗಳಲ್ಲಿನ ಒಂದು ವಾಕ್ಯವೃಂದ(passage)ವನ್ನು ಒಂದು ಪುಸ್ತಕ ಅಥವಾ ವಾರ್ತಾಪತ್ರಿಕೆಯಲ್ಲಿ ಓದಿ ಕೂಡಲೇ ಭಾಷಾಂತರಿಸಬೇಕು.

2. ಪರೀಕ್ಷಕರು ನೀಡಿದ ವಿಷಯ ವಸ್ತುವಿನ ಭಾಗವನ್ನು ತನ್ನ ಮಾತೃ ಭಾಷೆಯಲ್ಲದ ತಾನೇ ಆರಿಸಿಕೊಂಡ ಮತ್ತೊಂದು ಭಾರತೀಯ ಭಾಷೆಗೆ ಭಾಷಾಂತರಿಸಬೆಕು.

3. ಒಂದುವಾರ ಕಾಲ ವ್ಯಾಪಿಸಿದಂತೆ, 6 ಗಂಟೆಗಳ ಸಮಯವನ್ನು ಶ್ರವಣ ದೋಷವುಳ್ಳ ವ್ಯಕ್ತಿಗಳೊಂದಿಗೆ ಕಳೆಯಬೇಕು.

ಸೂಚನೆ : ದುಭಾಷಿಯು ತಾನು ಮಾತನಾಡುವ ಭಾಷೆಯನ್ನು ಸೂಚಿಸುವ, ಮತ್ತೊಂದು ಪದಕವನ್ನು ಬಲಜೇಬಿನ ಮೇಲ್ಭಾಗದಲ್ಲಿ ಅಥವಾ ಜರ್ಸಿಯ ಮೇಲೆ ಅದೇ ಸ್ಥಳದಲ್ಲಿ ಧರಿಸಬಹುದು.

**57. ಕಿವುಡರ ದುಭಾಷಿ (Interpreter to deaf)**



1. ಒಂದು ನಿಮಿಷಕ್ಕೆ 20 ಅಕ್ಷರಗಳ ವೇಗದಲ್ಲಿ 'ಬೆರಳು ಕಾಗುಣಿತ' (fingure spelling) ಓದಲು ಸಮರ್ಥನಾಗಿರಬೇಕು.
2. ಒಂದು ನಿಮಿಷಕ್ಕೆ 30 ಅಕ್ಷರಗಳ ವೇಗದಲ್ಲಿ 'ಬೆರಳು ಕಾಗುಣಿತ' ಕಳುಹಿಸಲು ಸಮರ್ಥನಿರಬೇಕು.
3. ಒಂದು ತಿಂಗಳಕಾಲ ವಿಸ್ತರಿಸಿದಂತೆ 10 ಗಂಟೆಗಳ ಕಾಲ, ಶ್ರವಣ ದೋಷವುಳ್ಳ ವ್ಯಕ್ತಿಗಳೊಂದಿಗೆ ಕಳೆಯಬೇಕು.

**58. ಪತ್ರಕರ್ತ (Journalist)**



1. ವರ್ತಮಾನ ಪತ್ರಿಕೆ ಅಥವಾ ನಿಯತಕಾಲಿಕದ ಸಂಪಾದಕ ಸಿಬ್ಬಂದಿಯಾಗಿ ಕನಿಷ್ಠ 6 ತಿಂಗಳ ಕಾಲ ಕಾರ್ಯನಿರ್ವಹಿಸರಬೇಕು.
2. ತನ್ನ ದಳದ ಚಟುವಟಿಕೆಗಳ ಬಗ್ಗೆ ಒಂದು ವರದಿಯನ್ನು ತಾನೇ ತಯಾರಿಸಬೇಕು ಮತ್ತು ಉಪನ್ಯಾಸ ಅಥವಾ ಭಾಷಣ, ಬಯಲು ರಂಗ ಮಂದಿರದ ಕಾರ್ಯಕ್ರಮ, ಸಂತೋಷಕೂಟ ಅಥವಾ ಮೇಳ ಇವುಗಳಲ್ಲಿ ಒಂದು ವಿಷಯದ ಬಗ್ಗೆ ವರದಿ ತಯಾರಿಸಬೇಕು.
3. ತಾನೇ ಬರೆದ ವರದಿ ಅಥವಾ ಲೇಖನದ ಪ್ರಕಟಿತ ಭಾಗವನ್ನು ಸಾದರ ಪಡಿಸಬೇಕು.
4. ಪ್ರತಿರೂಪ ಸಿದ್ಧತೆ (make-up) ಎನ್ನುವುದರ ಅರ್ಥವನ್ನು ತಿಳಿದಿರಬೇಕು. 8 ಪುಟಗಳ ನಿಯತಕಾಲಿಕ, ಸುತ್ತೋಲೆ, ಪುಸ್ತಕ ಪಟ್ಟಿ ಅಥವಾ ವರದಿಯನ್ನು ಪ್ರತಿನಿಧಿಸುವ ಪ್ರತಿರೂಪವನ್ನು ಮುದ್ರಣಕ್ಕಾಗಿ ಸಿದ್ಧಗೊಳಿಸಿರಬೇಕು.
5. ಅಚ್ಚುಮೊಳೆಯ ಬಿಂದು ಪದ್ಧತಿ (Point System) ತಿಳಿದಿರಬೇಕು ಮತ್ತು 6 ಸಾಮಾನ್ಯ ರೀತಿಯ ಅಚ್ಚುಮೊಳೆಗಳ ಬಗ್ಗೆ ತಿಳಿದಿರಬೇಕು.
6. ಮುದ್ರಣಕಾರರ ತಿದ್ದು ಪಡಿ ಚಿಹ್ನೆಗಳನ್ನು ತಿಳಿದಿರಬೇಕು.
7. ಅಚ್ಚಾಗಿರುವ ವಿಷಯದ ಕರಡು ಪ್ರತಿ ತಿದ್ದಲು ಅರ್ಥಮಾಡಿಕೊಂಡಿರಬೇಕು.

### 59. ಮಡಿವಾಳ (Launderer)



1. (ಅ) ಬಿಳಿಯ ಪತ್ತಿಯ ಉಡುಪು
   (ಆ) ಬಣ್ಣದ ಪತ್ತಿಯ ಉಡುಪು
   (ಇ) ಉಣ್ಣೆಯ ಉಡುಪು ಅಥವಾ ಒಂದು ಜೊತೆ ಮೊಳಕಾಲು ಚೀಲಗಳು.
   (ಈ) ಷರ್ಟ್ ಅಥವ ಅದರ ಸಮನಾದ ಉಡುಪು. ತೋಳುಗಳುಳ್ಳ ಮಕ್ಕಳ ಉಡುಪು (ಸಾಧ್ಯವಿದ್ದರೆ ರೇಷ್ಮೆ).

   ಇವುಗಳನ್ನು ಒಗೆದು ಸಿದ್ಧಗೊಳಿಸಿ ಪರೀಕ್ಷೆಗೆ ತರಬೇಕು.

2. ಇಸ್ತ್ರಿಮಾಡಲು. ಕಲೆತೆಗೆಯಲು ಸಮರ್ಥನಿರಬೇಕು. ಬಿಸಿನೀರು ಗಂಜಿ ಮಾಡಲು / ಇಸ್ತ್ರೀ ಮಾಡಲು ಸಮರ್ಥನಿರಬೇಕು.

**ಸೂಚನೆ:** ಈ ಪರೀಕ್ಷೆಯ ಕೆಲವು ಅಂಶಗಳನ್ನು, ಪರೀಕ್ಷಕರ ಸಮ್ಮುಖದಲ್ಲಿ ಪ್ರದರ್ಶಿಸಬೇಕು.

### 60. ಚರ್ಮ ಕೆಲಸಗಾರ (Leather Worker)



ಒಂದು ಜೊತೆ ಬೂಟುಗಳಿಗೆ ಅಥವಾ ಷೂಗಳಿಗೆ ಅಥವಾ ಚಪ್ಪಲಿಗಳಿಗೆ ಪಾದ ಮತ್ತು ಹಿಮ್ಮಡಿ ಭಾಗಗಳನ್ನು ಹೊಲಿದು ಅಥವಾ ಮೊಳೆ ಹೊಡೆದು ಜೋಡಿಸಬೇಕು. ಸಾಮಾನ್ಯ ಬಳಕೆಯಲ್ಲಿರುವ ಬೂಟುಗಳು. ಷೂಗಳು. ಚಪ್ಪಲಿಗಳು. ಸ್ಯಾಂಡಲ್‌ಗಳು ಅಥವಾ ಚರ್ಮದ ವಸ್ತುಗಳನ್ನು ಮರಸ್ತಿ ಮಾಡಬೇಕು.

ಕುದುರೆಯ ಜೀನನ್ನು ಹದಗೊಳಿಸಬೇಕು. ರಿಕಾಪಿನ ಚರ್ಮ ದುರಸ್ತಿ ಮಾಡಬೇಕು. ಕುದುರೆಯ ಜೀನು ರಿಕಾಪುಗಳ ಭಾಗಗಳನ್ನು ತಿಳಿದಿರಬೇಕು. ಇವುಗಳಲ್ಲಿ ಬಳಸುವ ಚರ್ಮದ ಬಗೆಗಳನ್ನು ತಿಳಿದಿರಬೇಕು.

ಅಥವಾ

**ಅಲಂಕಾರಿಕ ಕಾರ್ಯ:** ಅಲಂಕಾರಿಕ ಕಾರ್ಯಕ್ಕೆ ಬಳಸುವ ವಿವಿಧ ಬಗೆಯ ಚರ್ಮಗಳು. ಉಪಕರಣಗಳು. ಇವುಗಳ ಬಗ್ಗೆ ತಿಳಿದಿರಬೇಕು ಮತ್ತು ಉಪಯೋಗಿಸುವ ಬಗ್ಗೆ ವಿವಿಧ ರೀತಿಯ ರಂಗುಗಳನ್ನು ಬೆರೆಸುವ ಮತ್ತು ಉಪಯೋಗಿಸುವ ಬಗ್ಗೆ ತಿಳಿದಿರಬೇಕು. ರಂಗು ಹಾಕಿದ ವಿನ್ಯಾಸ ಇರುವ ಕೈಚೀಲ. ಹಣದ ಚೀಲ ಇತ್ಯಾದಿ ವಸ್ತುವೊಂದನ್ನು ತಾನೇ ತಯಾರಿಸಬೇಕು.

### 61. ಕುಷ್ಠರೋಗ ನಿಯಂತ್ರಣ (Leprosy Control)

1. "ಕುಷ್ಠರೋಗವನ್ನು ಗುಣಪಡಿಸಬಹುದು" ಎಂಬ ಸಂದೇಶವನ್ನು ಶ್ರವಣ

ದೃಶ್ಯ ಮಾಧ್ಯಮಗಳ ಮೂಲಕ ಬಿತ್ತರಿಸಬೇಕು. ಭಾರತ್ ಸ್ಕೌಟ್ ಮತ್ತು ಗೈಡ್‌ನ ಐದು ಅಂಶ ಕಾರ್ಯಕ್ರಮವನ್ನು ಪ್ರಚಾರ ಮಾಡಬೇಕು.



2. ಆಂದೋಲನದಲ್ಲಿ ನಿಮಗೆ ಸಹಕರಿಸಬಲ್ಲ ಚರ್ಮರೋಗ ತಜ್ಞರು, ರಾಷ್ಟ್ರೀಯ ಕುಷ್ಠ ನಿರ್ಮೂಲಾ ಕಾರ್ಯಕ್ರಮದ ಕಾರ್ಯಕರ್ತರು, ಸ್ವಯಂಸೇವಕರು, ಇತ್ಯಾದಿ ಸಂಪನ್ಮೂಲಗಳನ್ನು ಗುರುತಿಸಿ ಕೊಳ್ಳಬೇಕು.
3. ಗ್ರಾಮ/ಮೊಹಲ್ಲಾದ ಶಿಕ್ಷಣ ಸಂಸ್ಥೆಗಳಲ್ಲಿ ತಪಾಸಣಾ ಕಾರ್ಯಕ್ರಮ ಏರ್ಪಡಿಸಬೇಕು.
4. ಈ ಸಮಸ್ಯೆಯ ಬಗ್ಗೆ ತಮ್ಮ ಧೋರಣೆಯನ್ನು ಬದಲಿಸಿಕೊಳ್ಳುವಂತೆ ಸಮುದಾಯಕ್ಕೆ ಶಿಕ್ಷಣ ನೀಡುವುದು.
5. ತನ್ನ ಸ್ಥಳದಲ್ಲಿ ಜನರಿಗೆ ತಿಳಿ ಹೇಳಲು ವೈದ್ಯಕೀಯ ತಜ್ಞರ ಸಹಕಾರವನ್ನು ಪಡೆಯಬೇಕು.

## 62. ಸಾಕ್ಷರತೆ (Literacy)




1. ಗ್ರಾಮ / ಸ್ಥಳೀಯವಾಗಿ ವಯಸ್ಕ ಸಾಕ್ಷರತೆ ಆಂದೋಲನ ಏರ್ಪಡಿಸಬೇಕು.
2. ವಯಸ್ಕರಿಗೆ / ಶಾಲೆ ಬಿಟ್ಟವರಿಗಾಗಿ ರಾತ್ರಿ ಶಾಲೆ ಪ್ರಾರಂಭಿಸಬೇಕು ಅಥವಾ ಅವರಿಗೆ ಸಹಾಯ ಮಾಡಬೇಕು.
3. ಅಕ್ಷರಸ್ಥರ 3 ಪ್ರಥಮಗಳನ್ನು (3 Rs) ಕನಿಷ್ಠ 10 ಮಂದಿ ಅನಕ್ಷರಸ್ಥರಿಗೆ ಓದಲು, ಬರೆಯಲು ಮತ್ತು ಲೆಕ್ಕ ಮಾಡಲು ಕಲಿಸಬೇಕು ಅಥವಾ 10 ಮಕ್ಕಳಿಗೆ ಅವರ ವಿದ್ಯಾಭ್ಯಾಸದಲ್ಲಿ ಸಹಾಯ ಮಾಡಬೇಕು.
4. ವಯಸ್ಕಸಾಕ್ಷರತಾ ಆಂದೋಲನದ ಪ್ರೇರೇಪಣೆಗಾಗಿ ಕನಿಷ್ಠ 3 ಭಿತ್ತಿ ಪತ್ರಗಳನ್ನು ತಯಾರಿಸಬೆಕು.
5. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಪ್ರಕಟಿಸಿದ ಭಿತ್ತಿಪತ್ರಗಳು ಇತ್ಯಾದಿಗಳ ವಸ್ತುಪ್ರದರ್ಶನ ಏರ್ಪಡಿಸಬೇಕು.

## 63. ನಕ್ಷೆ ತಯಾರಕ (Map Maker)

1. ಪರೀಕ್ಷಕರು ನೀಡಿದ ಪ್ರಮಾಣಕ್ಕೆ ತಕ್ಕಂತೆ 10 ಎಕರೆಗಳಿಗೆ ಕಡಿಮೆ ಇಲ್ಲದ ಪ್ರದೇಶದ ನಕ್ಷೆಯನ್ನು ದಿಕ್ಸೂಚಿ ಮತ್ತು ಸಮತಲ ಮೇಜನ್ನು ಬಳಸಿ.

ತ್ರಿಕೋನ ವಿಧಾನದಲ್ಲಿ ರಚಿಸಬೇಕು. ಮೈದಾನಗಳು, ಕಟ್ಟಡಗಳು ಮತ್ತು ಕೆರೆ ಅಥವಾ ಅದಕ್ಕೆ ಸರಿಸಮನಾದ ಲಕ್ಷಣಗಳನ್ನು ಆ ಪ್ರದೇಶವು ಒಳಗೊಂಡಿರಬೇಕು.



2. ದಿಕ್ಸೂಚಿ ಮತ್ತು ಕಚ್ಚಾ ಪುಸ್ತಕದ (Field book) ಸಹಾಯದಿಂದ 1.5 ಕಿ.ಮೀ. ಉದ್ದದ ರಸ್ತೆಯ ನಕ್ಷೆ ತಯಾರಿಸಬೇಕು. ಆದರೆ ಎರಡೂ ಬದಿಗಳ $^{1}/_{10}$ ಕಿ.ಮೀ. ಒಳಗಿನ ಎಲ್ಲಾ ಲಕ್ಷಣಗಳನ್ನೂ ಮತ್ತು ವಸ್ತುಗಳನ್ನೂ ಅದು ಒಳಗೊಂಡಿರಬೇಕು. ಅದು, ಪರೀಕ್ಷಕರು ನೀಡಿದ ಪ್ರಮಾಣಕ್ಕೆ ಅನುಗುಣವಾಗಿರಬೇಕು. ಕಚ್ಚಾ ಪುಸ್ತಕವನ್ನು ತಪಾಸಣೆಗಾಗಿ ನೀಡಬೇಕು.

3. ಭಾರತೀಯ ಸರ್ವೇಕ್ಷಣ ಇಲಾಖೆಯ 1 ಅಂಗುಲ ನಕ್ಷೆಯ ಯಾವುದೇ ಭಾಗವನ್ನು ಪರೀಕ್ಷಕರು ನಿರ್ಧರಿಸಿದ ಪ್ರಮಾಣಕ್ಕೆ ತಕ್ಕಂತೆ ದೊಡ್ಡದು ಅಥವಾ ಚಿಕ್ಕದು ಮಾಡಬೇಕು.

## 64. ಗುರಿಕಾರ (Marksman)

ಮೂರು ಬದಲಿ ಪರೀಕ್ಷೆಗಳಲ್ಲೊಂದರಲ್ಲಿ ಮೂರು ಬಾರಿ ಗುರಿ ಹೊಡೆಯಬೇಕು ಇದು ಅನುಕ್ರಮವಾಗಿ ಇರಬಹುದು ಅಥವಾ ಬೇರೆ ಬೇರೆ ದಿನಾಂಕಗಳಲ್ಲಿ ಇರಬಹುದು. ಪ್ರತಿ ಸಂದರ್ಭದಲ್ಲಿಯೂ ನಿಗದಿತ ಕನಿಷ್ಠ ಅಂಕಕ್ಕಿಂತಲೂ ಹೆಚ್ಚು ಗಳಿಸಬೇಕು.



ಅ. ರೈಫಲ್–ಸಣ್ಣ ಬೋರ್ (.22 ಅಂ.) ಸಿಂಗಲ್ ಲೋಡಿಂಗ್ ವಿಧ; ದೃಷ್ಟಿ ಸಾಧನ – ಯಾವುದಾದರೂ (ಟೆಲಿಸ್ಕೋಪಿಕ್ ಹೊರತು ಪಡಿಸಿ) ನಿಲುವು ಮಲಗಿದಂತೆ; ತೂಗುಪಟ್ಟಿ – ಬಳಸಬಹುದು.

ಹೊಡೆತಗಳು–

ಈ ಕೆಳಗಿನ ಒಂದು ದೂರಗಳಲ್ಲಿ ಎರಡು ಫಲಕಗಳಿಗೆ 20 ಹೊಡೆತಗಳು

| ಪರೀಕ್ಷೆ | ದೂರ | ಕನಿಷ್ಠ ಅಂಕ | ಲಕ್ಷ್ಯ |
|---|---|---|---|
| 1. | 22.9 ಮೀ | 155 | ಎಸ್.ಎಂ.ಆರ್.ಸಿ. ಮ್ಯಾಚ್ |
| 2. | 22.9 ಮೀ. | 80 | ಮಿಲಿಟರಿ 200.25 |

ಆ. ಏರ್ ರೈಫಲ್ ಬೋರ್ (.117 ಅಂ.) ಸಿಂಗಲ್ ಲೋಡಿಂಗ್ ವಿಧ–ನಿಂತಂತೆ ಅಥವಾ ಮಲಗಿದಂತೆ ತೂಗುಪಟ್ಟಿ – ಬಳಸಬಹುದು.

ಹೊಡೆತಗಳು–ಈ ಕೆಳಗಿನ ಒಂದು ದೂರದಲ್ಲಿ ಎರಡು ಫಲಕಗಳಿಗೆ 20 ಹೊಡೆತಗಳು

| ದೂರ | ಕನಿಷ್ಠ ಅಂಕ | ಲಕ್ಷ್ಯ |
|---|---|---|
| 5.48 ಮೀ | 150 | ಎಸ್.ಎಂ.ಆರ್.ಸಿ. ಮ್ಯಾಚ್ 5 ಬುಲ್ ಏರ್ ರೈಫಲ್ |

ಸೂಚನೆ : i. ಲಕ್ಷ್ಯಫಲಕದ ಕೇಂದ್ರಬಿಂದುವಿಗೆ ಸಮೀಪದ ಹೊಡೆತವು ರಂಧ್ರದ ಅಂಚು, ಹೊಡೆತದ ಬೆಲೆಯನ್ನು ನಿರ್ಧರಿಸುತ್ತದೆ.

ii. ಏರ್ ರೈಫಲ್ ಬಳಸುವಾಗ, ಗುಂಡುಗಳು ಹಿಂದಕ್ಕೆ ಪುಟಿದು ಗುರಿಕಾರನ ಕಣ್ಣುಗಳಿಗೆ ಅಪಾಯವಾಗದಂತೆ, ಲಕ್ಷ್ಯವನ್ನು ಸಿದ್ಧಪಡಿಸರಬೇಕು.

**ಪರೀಕ್ಷಕರಿಗೆ ಸೂಚನೆಗಳು :**

1. ಲಕ್ಷ್ಯದ ಮಧ್ಯಭಾಗದಿಂದಲೂ ಬದಲಾಯಿಸಿದ ದೃಷ್ಟಿ ಸಾದನವನ್ನು ಸ್ಕೌಟನು ತಾನೇ ಸರಿಪಡಿಸಿಕೊಳ್ಳಬೇಕು. ಸರಿಪಡಿಸಿಕೊಂಡ ನಂತರ 10ಕ್ಕಿಂತ ಹೆಚ್ಚು ದೃಷ್ಟಿ ಹೊಡೆಗಳನ್ನು ಅನುಮತಿಸಬಾರದು.
2. ಸಾಮಾನ್ಯ ಮುನ್ನೆಚ್ಚರಿಕೆಗಳನ್ನು ತಿಳಿದಿರಬೇಕು. ರೈಫಲ್ ಷೂಟಿಂಗ್‌ನ ನಿಯಮಗಳ ಅರಿವಿರಬೇಕು. ಪ್ರಾಥಮಿಕ ಕ್ರಿಯೆಗಳ ಅರಿವಿರಬೇಕು. ಸಡಿಲಗೊಳ್ಳಬಹುದಾದ ಭಾಗಗಳನ್ನು ಸರಿಪಡಿಸಲು ತಿಳಿದಿರಬೇಕು.
3. ವಿವಿಧ ಆಧರ್ಶ ದೂರಗಳ ದೃಷ್ಟಿ ಸಾಧನ ಅಳತೆ ತಿಳಿದಿರಬೇಕು ಹಾಗೂ ಗುರುತು ಮಾಡಿಕೊಂಡಿರಬೇಕು. ಗುಂಡಿನ ಪಥ ಮತ್ತು ಅದರ ಹಾನಿಕಾರಕ ಶಕ್ತಿ ತಿಳಿದಿರಬೇಕು.
4. ರೈಫಲನ್ನು ಸ್ವಚ್ಛಗೊಳಿಸಲು ತಿಳಿದಿರಬೇಕು.

**65. ಹವಾಮಾನ ತಜ್ಞ (Meteorologist)**

1. i. ಸರಳ ಮಳೆ ಮಾಪಕವನ್ನು ತಯಾರಿಸಬೇಕು.

ii. ವಾಯುಯಂತ್ರ ತಯಾರಿಸಿ ಗಾಳಿಯ ವೇಗ ಅಂದಾಜಿಸಬೇಕು.

iii. ಉಷ್ಣತಾ ಮಾಪಕ ನೆಲೆ ನಿರ್ಮಿಸಿ, ಗಾಳಿಯ ಉಷ್ಣತೆಯನ್ನು ಅಳೆಯಲು ಉಷ್ಣತಾ ಮಾಪಕವನ್ನೂ ವ್ಯವಸ್ಥೆ ಗೊಳಿಸಬೇಕು.



iv. ಒಂದು ತಿಂಗಳಕಾಲ ಹವಾಮಾನ ದಾಖಲೆಯನ್ನು ತಯಾರಿಸಿ ಇಡಬೇಕು.

2. ತನ್ನ ಸ್ಥಳೀಯ ವಾಯುಗುಣದ ಬಗ್ಗೆ ಲೇಖನ ಬರೆಯಬೇಕು.

3. ಈ ಕೆಳಗಿನ ವಿಧಾನಗಳನ್ನು ಅನುಸರಿಸಿ ಹವಾಮಾನ ಮುನ್ಸೂಚನೆ ನೀಡುವ ಸಾಮರ್ಥ್ಯವನ್ನು ಪ್ರದರ್ಶಿಸಬೇಕು

   i. ಗಾಳಿಯ ದಿಕ್ಕು ಮತ್ತು ಶಕ್ತಿ, ಉಷ್ಣತೆ, ಪ್ರಕ್ಷೇಪಣ ಹಾಗೂ ಸಾಮಾನ್ಯ ಹವಾಮಾನಗಳ ಆಧಾರದ ಮೇಲೆ

   ii. ನಿರ್ದ್ರವ ವಾಯುಭಾರ ಮಾಪಕವನ್ನು ಬಳಸಿಕೊಳ್ಳುವುದರ ಮೂಲಕ

   iii. ಮೋಡದ ಚಲನೆ ಮತ್ತು ವಿಧವನ್ನು ಗುರುತಿಸುವುದರ ಮೂಲಕ

   iv. ಪರಿಮಿತಿ ಹವಾಮಾನ ವಿದ್ಯೆ ಬಳಸಿಕೊಳ್ಳುವುದರ ಮೂಲಕ ಅಲ್ಪಾವಧಿ ಮುನ್ಸೂಚನೆಯನ್ನು ಹೇಳುವುದು.

   v. ಹವಾಮಾನ ವಿದ್ಯೆಯನ್ನು ಬಳಸಿಕೊಂಡು ವಿಸ್ತೃತ ಪರಿಮಿತಿಯ ಮುನ್ಸೂಚನೆ ಹೇಳುವುದು.

**66. ವಾಹನ ಕರ್ಮಿ (Motor Mechanic)**



1. ಅಂತರ್ದಹನ ಇಂಜಿನ್‌ನ ಕಾರ್ಯ ಹಾಗೂ ಅದರ ಎಲ್ಲಾ ಮುಖ್ಯ ಭಾಗಗಳ ಹೆಸರು ಮತ್ತು ಕಾರ್ಯಗಳನ್ನು ತಿಳಿದಿರಬೇಕು.

2. ಈ ಕೆಳಕಂಡ ಅಂಶಗಳನ್ನು ಪ್ರದರ್ಶಿಸುವ ಸಾಮರ್ಥ್ಯವಿರಬೇಕು.

   i. ವಾಹನದ ಭಾಗಗಳಿಗೆ ಎಣ್ಣೆ/ಗ್ರೀಸ್ ಹಾಕುವುದು, ಗಿಯರ್ ಪೆಟ್ಟಿಗೆಗೆ ಎಣ್ಣೆ ಹಾಕುವದು ಮತ್ತು ಹಿಂಭಾಗದ ಅಚ್ಚಿಗೆ ಎಣ್ಣೆ ಹಾಕುವುದು.

   ii. ವಿದ್ಯುತ್ ಕೋಶದ (ಬ್ಯಾಟರಿ) ನೀರನ್ನು ಬದಲಾಯಿಸುವುದು.

   iii. ಬ್ರೇಕ್‌ಗಳನ್ನು ಸರಿಪಡಿಸುವುದು

   iv. ಕಾರಿನ ಚಕ್ರವನ್ನು ಬದಲಾಯಿಸುವುದು

   v. ವಿದ್ಯುತ್ ಕಿಡಿಯ ಅವಧಿಯನ್ನು (ಇಗ್ನಿಷನ್ ಟೈಂ) ಪರೀಕ್ಷಿಸುವುದು. ವಿದ್ಯುತ್ ಕಿಡಿ ಬೆಣೆ (ಸ್ಪಾರ್ಕ್ ಪ್ಲಗ್)ಯನ್ನು ಸ್ವಚ್ಛಗೊಳಿಸುವುದು.

   vi. ಕಾರ್ಬುರೇಟರ್‌ನ್ನು ತೆಗೆದು, ಸ್ವಚ್ಛಗೊಳಿಸಿ, ಪುನಃ ಜೋಡಿಸುವುದು.

3. ಪೆಟ್ರೋಲ್ ಬಳಕೆಯನ್ನು ಕಿಲೋಮೀಟರ್‌ಗಳಲ್ಲಿ ಹೇಗೆ ದಾಖಲಿಸಬೇಕೆಂಬುದನ್ನು ತೋರಿಸಬೇಕು.

4. ಚಾಲನೆಯಾಗದಕಾರನ್ನು ಕ್ರಮವಾಗಿ ಪರೀಕ್ಷಿಸಬೇಕು ಮತ್ತು ಅದರ ದೋಷವನ್ನು ನಿರ್ಧರಿಸಬೇಕು.

**67. ಸಂಗೀತಗಾರ (Musician)**




1. ವೀಣೆ, ಸಿತಾರ್, ಪಲ್ವಾ, ಪಟ್ಲೆ, ನಾಗಿ, ಕಾಜಿ, ಕೊಳಲು, ಪಿಟೀಲು, ಪಿಂಯಾನೋ, ಹಾರ್ಮೋನಿಯಂ, ರಾಗಮಾಲಿಕೆ, ಆರ್ಗನ್ ಮತ್ತು ಇತರ ಅಧಿಕೃತ ವಾದ್ಯಗಳಲ್ಲಿ ಒಂದನ್ನು ಯಥಾರ್ಥವಾಗಿ ನುಡಿಸಬೇಕು.
2. ಭಾರತೀಯ ಶಾಸ್ತ್ರೀಯ ಸಂಗೀತದ ಎರಡು ರಾಗಗಳನ್ನು ಯಥಾರ್ಥವಾಗಿ ನುಡಿಸಬೇಕು ಅಥವಾ ಹಾಡಬೇಕು.
3. ರಾಷ್ಟ್ರೀಯ ಕೇಂದ್ರ ಕಛೇರಿಯಿಂದ ಸಂಗ್ರಹಿಸಲ್ಪಟ್ಟಿರುವ ಸಮುದಾಯ ಗೀತೆಗಳಲ್ಲಿ ಕನಿಷ್ಠ ಮೂರನ್ನು ನುಡಿಸಬೇಕು. ಮತ್ತು 40 ಮಕ್ಕಳಿಗೆ ಹಾಡಲು ಕಲಿಸಬೇಕು.

**68. ಪ್ರಕೃತಿ ತಜ್ಞ (Naturalist)**



1. ಸ್ವಂತ ವೀಕ್ಷಣೆಯಿಂದ, ಒಂದು ಕಾಡುಹೂವಿನ ಗರ್ಭದಾರಣೆ ಮತ್ತು ಬೆಳವಣಿಗೆಯನ್ನು, ಸ್ವಂತ ವಾಕ್ಯಗಳಲ್ಲಿ ವಿವರಿಸಬೇಕು. ಈ ಕೆಳಗಿನವುಗಳಲ್ಲಿ ಒಂದರ ಬಗ್ಗೆ ಸ್ವಂತ ವೀಕ್ಷಣೆಯ ಮೂಲಕ, ಸ್ವಂತ ವಾಕ್ಯಗಳಲ್ಲಿ ವಿವರಿಸಬೇಕು.

   ಕಪ್ಪೆಯ ಬೆಳವಣಿಗೆ, ಕೀಟ, ಜೇಡ ಅಥವಾ ಮೀನು ಇವುಗಳ ಜೀವನ ಚರಿತ್ರೆ, ಪಕ್ಷಿಗಳ ಬೆಳವಣಿಗೆ, ಅಭ್ಯಾಸಗಳು, ಮತ್ತು ಕೂಗು ಗಾನಗಳು; ನಾಲ್ಕು ಪ್ರಾಣಿಗಳ ಅಭ್ಯಾಸಗಳು ಮತ್ತು ನೀರಿನ ಕೊಳದಲ್ಲಿ ವಾಸಿಸುವ ಕೆಲವು ಜೀವಿಗಳ ಅಭ್ಯಾಸಗಳು, ಇವುಗಳ ಬಗ್ಗೆ ವಿವರಿಸಬೇಕು.
2. ಯಾವುದೇ ಎರಡು ಋತುಗಳ (ವಸಂತ ಋತು, ಗ್ರೀಷ್ಮ ಋತು, ವರ್ಷ ಋತು, ಶರದೃತು, ಹೇಮಂತ ಋತು, ಶಿಶಿರ ಋತು) ನೈಸರ್ಗಿಕ ದಿನಚರಿ ದಾಖಲಿಸಬೇಕು. 10 ಪಕ್ಷಿಗಳು, 10 ಸಸ್ಯಗಳು, 10 ಮರಗಳು, ಹತ್ತು ಚಿಟ್ಟೆ ಅಥವಾ ಪತಂಗಗಳು ಮತ್ತು ಆ ಋತುಗಳಲ್ಲಿ ಕಂಡ ಪ್ರಾಣಿಗಳು ಇವುಗಳ ಸಂಕ್ಷಿಪ್ತ ವಿವರಗಳನ್ನು ಒಳಗೊಂಡಿರಬೇಕು. ದಿನಾಂಕ ಮತ್ತು ಸ್ಥಳಗಳನ್ನು ನಮೂದಿಸಿರಬೇಕು. ಪೆನ್ಸಿಲ್ ಚಿತ್ರಣ, ಎಲೆಗಳ ಕಾರ್ಬನ್ ಮುದ್ರಣ ಅಥವಾ ಒತ್ತಲ್ಪಟ್ಟ ಮಾದರಿಗಳು ದಾಖಲೆಯಲ್ಲಿರಬೇಕು.

ಅಥವಾ

ಪಟ್ಟಣಗಳಲ್ಲಿ ನೈಸರ್ಗಿಕ ದಿನಚರಿಗೆ ಬದಲಾಗಿ ಈ ಕೆಳಗಿನವುಗಳಲ್ಲಿ ಒಂದನ್ನು ಆರಿಸಿಕೊಳ್ಳಬಹುದು. ಈ ಪದಕಕ್ಕಾಗಿ ಒಂದು ಪ್ರದೇಶವನ್ನು ಪಟ್ಟಣ ಎಂದು ಪರಿಗಣಿಸಬಹುದೇ ಎಂಬುದನ್ನು ಜಿಲ್ಲಾ ಆಯುಕ್ತರು ನಿರ್ಧರಿಸಬೇಕು.

i. 30 ವಿವಿಧ ಜಾತಿಯ ಹೂಗಳು, ಫರ್ನ್‌ಗಳು, ಹುಲ್ಲುಗಳು ಇವುಗಳನ್ನು ಒಣಗಿಸಿ, ಅಂಟಿಸಿ ಸಂಗ್ರಹ ಮಾಡಿರಬೇಕು. ಇವುಗಳ ಹೆಸರು ಸ್ಥಳ ದಿನಾಂಕಗಳನ್ನು ನಮೂದಿಸಿರಬೇಕು. 10 ಮಾದರಿಗಳ ಸಂಕ್ಷಿಪ್ತ ವಿವರವನ್ನು ಬರೆದಿರಬೇಕು.

ii. 20 ಮರಗಳ ಎಲೆಗಳ ರೇಖಾಚಿತ್ರ, ಅಥವಾ ಕಾರ್ಬನ್ ಮುದ್ರೆ ಅಥವಾ ಚಿತ್ರಪಟಗಳ ಸಂಗ್ರಹ ಮಾಡಬೇಕು. ಅವುಗಳ ಹೆಸರು, ಸ್ಥಳ, ಮತ್ತು ದಿನಾಂಕಗಳ ವಿವರಗಳು ಇರಬೇಕು. ಅವುಗಳನ್ನು ಗುರುತಿಸಬೇಕು. ಆ ಪೈಕಿ 10 ಮರಗಳ ಬಾಹ್ಯ ಚಹರೆಯ ವಿವರಗಳನ್ನು ಬರೆದಿರಬೇಕು.

iii. ಹತ್ತು ಜೀವಂತ ಪ್ರಾಣಿಗಳು ಅಥವಾ ಹತ್ತು ಜೀವಂತ ಪಕ್ಷಿಗಳ ರೇಖಾಚಿತ್ರಗಳನ್ನು ಬರೆದು ಅವುಗಳಲ್ಲಿ ಐದರ ವಿವರಗಳನ್ನು ಬರೆಯಬೇಕು.

iv. 60 ವಿವಿಧ ಜೀವಂತ ಪ್ರಾಣಿಗಳ ಅಥವಾ ಪಕ್ಷಿಗಳನ್ನು ಹೆಸರಿಸಬೇಕು. ಮತ್ತು ಅವುಗಳಲ್ಲಿ ಐದರ ಜೀವನ ವಿವರಗಳನ್ನು ಬರೆಯಬೇಕು.

v. ಪ್ರಾಣಿ ಸಂಗ್ರಹಾಲಯದಲ್ಲಿರುವ 60 ವಿವಿಧ ಬಗೆಯ ಪ್ರಾಣಿಗಳು / ಪಕ್ಷಿಗಳು ಉರಗಗಳು / ಮೀನುಗಳು ಅಥವಾ ವಸ್ತು ಸಂಗ್ರಹಾಲಯದಲ್ಲಿರುವ ಕೀಟ ಅಥವಾ ಹೆಸರಿಸದಿರುವ ಅವುಗಳ ವರ್ಣಚಿತ್ರಗಳನ್ನು ನೋಡಿ ಹೆಸರಿಸಬೇಕು. ಅವುಗಳಲ್ಲಿ 20 ಜೀವಿಗಳ ಜೀವನ, ಅಭ್ಯಾಸಗಳು, ಚಹರೆಗಳು, ಹಾಗೂ ಗುರುತುಗಳನ್ನು ವಿವರಿಸಬೇಕು.

vi. 30 ವಿವಿಧ ಬಗೆಯ ಪಕ್ಷಿಗಳ ಅಥವಾ ಪ್ರಾಣಿಗಳ ಅಭ್ಯಾಸವನ್ನು ವಿವರಿಸಬೇಕು. ಅವುಗಳ ಹಾಡುಗಳು, ಅಥವಾ ಕೂಗುಗಳಿಂದ ಅವುಗಳನ್ನು ಗುರುತಿಸಬೇಕು.

## 69. ಪೌಷ್ಟಿಕತೆ ಬೋಧಕ (Natrition Educator)

1. ಪೋಷಣೆಯ ಮುಖ್ಯ ಅಂಶಗಳಾದ ಕ್ಯಾಲೋರಿ, ಶರ್ಕರ ಪಿಷ್ಟ, ಪ್ರೋಟೀನ್‌ಗಳು, ಜೀವಸತ್ವಗಳು, ಲವಣಗಳು, ಇತ್ಯಾದಿಗಳ ಅರಿವಿರಬೇಕು.



ಇವುಗಳು ದೊರಕುವ ಸಾಮಾನ್ಯ ಹಾಗೂ ದೈನಂದಿನ ಆಹಾರದಲ್ಲಿ ಅವುಗಳ ಸರಿಯಾದ ಪ್ರಮಾಣದ ಅರಿವಿರಬೇಕು.

2. ಅಪೌಷ್ಠಿಕತೆ (Malnutrition)ಯನ್ನು ಗುರುತಿಸಬೇಕು ಹಾಗೂ ಮಾನವ ದೇಹದ ಮೇಲೆ ಅದರ ಪರಿಣಾಮವನ್ನು ತಿಳಿದಿರಬೇಕು.
3. ಶಾಲೆಗೆ ಹೋಗುವ ಮಗು, ಗರ್ಭಿಣಿ ಸ್ತ್ರೀ ಮತ್ತು ಸಾಮಾನ್ಯ ವಯಸ್ಕ ಇವರುಗಳ ಸಮತೋಲಿತ ಆಹಾರ ಪಟ್ಟಿ ತಯಾರಿಸಬೆಕು.
4. ಕೆಲವು ಬಗೆಯ ಆಹಾರ ಮತ್ತು ಪಾನೀಯಗಳ ಅತಿ ಬಳಕೆಯಿಂದ ಆಗುವ ಅಪಾಯಗಳ ಅರಿವಿರಬೇಕು.
5. ಚಹಾ, ಕಾಫಿ ಮುಂತಾದ ಮಾದಕವಲ್ಲದ ಪಾನೀಯಗಳನ್ನು ದುರ್ಬಳಕೆ ಮಾಡದಂತೆ ಜನರಲ್ಲಿ ಜಾಗೃತಿ ಮೂಡಿಸಬೇಕು.
6. ತನ್ನ ಗ್ರಾಮ / ಪರಿಸರದಲ್ಲಿ ಪೌಷ್ಠಿಕತೆಯ ಸಮೀಕ್ಷೆ ನಡೆಸಿ, ವೈದ್ಯರನ್ನು ಸಂಪರ್ಕಿಸಲು ಜನರನ್ನು ಪ್ರೋತ್ಸಾಹಿಸಬೇಕು.
7. ಪೌಷ್ಠಿಕತೆಯ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು, ಕನಿಷ್ಠ ಮೂರು ಭಿತ್ತಿ ಪತ್ರಗಳನ್ನು ತಯಾರಿಸಬೇಕು.

**70. ಹುಟ್ಟುಹಾಕುವವ (Oarsman)**



1. ಒಬ್ಬನೇ ದೋಣಿಯನ್ನು ನಿರ್ವಹಿಸಬೆಕು. ನದಿಗಳಲ್ಲಿ ಹುಟ್ಟು ಹಾಕುವುದು, (Row) ಹಗುರವಾಗಿ ಎರಡೂ ಹುಟ್ಟುಗಳಿಂದ ಮುನ್ನಡೆಸುವುದು (Scull) ಮತ್ತು ತೇಲಿ ನಡೆಸುವುದು (Punt) ಮಾಡಬೇಕು ಅಥವಾ ಏಕಗತಿಯಲ್ಲಿ ಹುಟ್ಟು ಹಾಕಬೇಕು ಅಥವಾ ಕಟ್ಟೆ ಮರಕ್ಕೆ ಹುಟ್ಟು ಹಾಕಬೇಕು.
2. ಹುಟ್ಟುಹಾಕಿ ದೋಣಿಯ ಗತಿ ಬದಲಾಯಿಸಬೇಕು ಮತ್ತು ಹಡಗಿನ ಪಕ್ಕಕ್ಕೆ ಸರಿಸಬೇಕು ಮತ್ತು ಹಡಗಿನ ಇಳಿದಾಣದ ಬಳಿ ನಿಲ್ಲಿಸಬೇಕು.
3. ಮತ್ತೊಂದು ದೋಣಿಯನ್ನು ಎಳೆತರಬೇಕು ಅಥವ ತನ್ನ ದೋಣಿಯನ್ನು ಇನ್ನೊಂದು ದೋಣಿ ಎಳೆದೊಯ್ಯುವಾಗ ನಿಭಾಯಿಸಬೇಕು. ಮತ್ತು ಬಂದರುಕಟ್ಟೆ (wharf) ಅಥವೇ ತೇಲು ಬುರುಡೇ (buoy)ಯ ಬಳಿ ತಂದು ಕಟ್ಟಬೇಕು.
4. ದೋಣಿಯನ್ನು ಲಂಗರು ಹಾಕಲು ಬರಬೇಕು. ದೋಣಿಯ ನಿರ್ವಹಣೆ

ಯಲ್ಲಿ ಬೇಕಾಗುವ ಸಾಮಾನ್ಯ ಗಂಟುಗಳು, ಮಲುಕುಗಳು (hitches) ಮಣಿಗಳು (bends) ಮತ್ತು ಹೆಣಿಗೆಗಳು (splies) ಇವುಗಳನ್ನು ಹಾಕಲು ಬರಬೇಕು ಮತ್ತು ಹಗ್ಗವನ್ನು ಎಸೆಯಲು (throw a line) ಬರಬೇಕು.

## 71. ಮಾರ್ಗ ಶೋಧಕ (Path Finder)



1. ತನ್ನ ಕೇಂದ್ರದ ಅಥವಾ ಮನೆಯ ಸುತ್ತಲಿನ ಪ್ರದೇಶವನ್ನು ಸ್ವತಃ ಪರಿಶೋಧಿಸಿ, ತನಿಖೆ ನಡೆಸಿ, ವ್ಯಕ್ತಿಗತವಾಗಿ ಪರಿಚಯ ಹೊಂದಿರಬೇಕು, ಇದರಲ್ಲಿ ಸಾರ್ವಜನಿಕ ಕಟ್ಟಡಗಳು, ಸಾರ್ವಜನಿಕ ಸೇವೆಯ ಅವಕಾಶಗಳು-ಅಗ್ನಿಶಾಮಕ, ಸಾಗಾಣಿಕೆ, ಸಂಪರ್ಕ, ಸಾರ್ವಜನಿಕ ಆರೋಗ್ಯ ಇತ್ಯಾದಿ-ವೈದ್ಯರು, ಜವಾಬ್ದಾರಿಯುತ ಅಧಿಕಾರಿಗಳು ಪ್ರಮುಖ ವ್ಯಕ್ತಿಗಳ ನಿವಾಸಗಳು, ಮಾರ್ಗಗಳು, ಕಾಲು ಹಾದಿಗಳು, ಆಟದ ಮೈದಾನಗಳು ಮತ್ತು ಇತರ ಸಾರ್ವಜನಿಕ ಆಸ್ತಿ ಪಾಸ್ತಿಗಳ ಬಗ್ಗೆ ವಿಶೇಷ ಮಾಹಿತಿಯನ್ನು ಪಡೆದಿರಬೇಕು.

**ಸೂಚನೆ :** ವ್ಯಕ್ತಿಗತ ಮಾಹಿತಿ ಹೊಂದಿರಬೇಕಾದ ಪ್ರದೇಶದ ವಿವರಗಳು ಈ ಕೆಳಕಂಡಂತೆ ಇರಬೇಕು. 20,000 ಜನಸಂಖ್ಯೆಯ ನಗರ: ದಳದ ಕೇಂದ್ರದಿಂದ 3 ಕಿ.ಮೀ. ತ್ರಿಜ್ಯ; 20,000 ದಿಂದ 1,00,000 ಜನಸಂಖ್ಯೆಯ ನಗರ: ದಳದ ಕೇಂದ್ರದಿಂದ 2 ಕಿ.ಮೀ. ತ್ರಿಜ್ಯ; 1,00,000 ಕ್ಕೆ ಮೀರಿದ ಜನಸಂಖ್ಯೆಯ ನಗರ: ದಳದ ಕೇಂದ್ರದಿಂದ 1 ಕಿ.ಮೀ. ತ್ರಿಜ್ಯ. ಜಿಲ್ಲಾ ಆಯುಕ್ತರು ವಿವೇಚನಾಯುತವಾಗಿ ಅನಪೇಕ್ಷಿತ ಸ್ಥಳಗಳು, ಉದ್ಯಾನವನಗಳು ಬಯಲು ಪ್ರದೇಶ ಇವುಗಳನ್ನು ಹೊರತು ಪಡಿಸಿ ಅವಕ್ಕೆ ಸರಿಸಮವಾದ ಪ್ರದೇಶವನ್ನು ಸೇರ್ಪಡೆ ಮಾಡಬಹುದು.

2. ರಾತ್ರಿ ಅಥವಾ ಹಗಲಿನಲ್ಲಿ 8 ಕಿ.ಮೀ ತ್ರಿಜ್ಯದ ಅಳತೆಯಲ್ಲಿ, ಅಪರಿಚಿತರಿಗೆ ಮಾರ್ಗದರ್ಶನ ಮಾಡುವಷ್ಟು ಸಾಮಾನ್ಯ ಮಾಹಿತಿಯನ್ನು ತಮ್ಮ ಜಿಲ್ಲೆಯ ಬಗ್ಗೆ ತಿಳಿದಿರಬೇಕು, 40 ಕಿ.ಮೀ. ತ್ರಿಜ್ಯದ ಅಳತೆಯ ಪ್ರಮುಖ ಉಪನಗರಗಳು, ಜಿಲ್ಲೆ ಅಥವಾ ಪರ್ಯಾಯವಾಗಿ (ದೊಡ್ಡ ಪಟ್ಟಣಗಳಲ್ಲಿ) ದೇಶದ ಯಾವ ಯಾವ ಭಾಗಗಳಿಗೆ ಪ್ರಮುಖ ರೈಲುಮಾರ್ಗಗಳಿವೆ ಎಂಬುದರ ಸ್ಪಷ್ಟ ಮಾಹಿತಿ ಹೊಂದಿರಬೇಕು. ಮತ್ತು ಟ್ರಾಂ ಅಥವಾ ಬಸ್ ನಿಲ್ದಾಣಕ್ಕೆ ತಲುಪುವ ಮಾರ್ಗಗಳನ್ನು ತಿಳಿದಿರಬೇಕು. ಅಲ್ಲದೆ ತನ್ನ ದಳ ಕೇಂದ್ರ ಅಥವಾ ಮನೆಯಿಂದ 12 ಪ್ರಮುಖ ಸ್ಥಳಗಳಿಗೆ (ವಸ್ತು ಸಂಗ್ರಹಾಲಯ, ಪ್ರಾಣಿಸಂಗ್ರಹಾಲಯ ಇತ್ಯಾದಿ) ಟ್ರಾಂ ಮೂಲಕ, ಬಸ್

ಮೂಲಕ, ಅಥವಾ ರೈಲಿನ ಮೂಲಕ ಪ್ರಯಾಣಿಸುವ ಮಾರ್ಗವನ್ನು ತಿಳಿದಿರಬೇಕು.

3. ಸ್ಥಳೀಯ ಚರಿತ್ರೆ ಮತ್ತು ಇರಬಹುದಾದ ಚಾರಿತ್ರಿಕ ಕಟ್ಟಡಗಳ ಬಗ್ಗೆ ತಿಳಿದಿರಬೇಕು.

**72. ಛಾಯಾಚಿತ್ರ ಗ್ರಾಹಕ (Photographer)**



1. ಎಂಟು ಬೇರೆ ಬೇರೆ ವಿಷಯಗಳ ಛಾಯಾಚಿತ್ರಗಳನ್ನು ತೆಗೆದು, ತೊಳೆದು, ಪ್ರಿಂಟ್ ಮಾಡಬೇಕು. ಅವುಗಳ ಪೈಕಿ, ಎರಡು ಒಳಾಂಗಣ, ಎರಡು ಭೂದೃಶ್ಯ, ಎರಡು ತಕ್ಷಣದ ಛಾಯಾ ಚಿತ್ರಗಳನ್ನು ಒಳಗೊಂಡಿರಬೇಕು.
2. ಮಸೂರಗಳ (Lense) ತತ್ತ್ವ ಮತ್ತು ಉಪಯೋಗ ತಿಳಿದಿರಬೇಕು. ಕ್ಯಾಮೆರಾಗಳ ರಚನೆ ಮತ್ತು ಛಾಯಾಚಿತ್ರಗಳನ್ನು ತೊಳೆಯುವ ರಾಸಾಯನಿಕಗಳ ಕ್ರಿಯೆ ತಿಳಿದಿರಬೇಕು.

**73. ಅಗ್ರಗಾಮಿ (Pioneer)**



1. 22.5 ಸೆಂ.ಮೀ. (9. ಅಂ.) ಸುತ್ತಳತೆಯ ಮರವನ್ನು ಅಥವಾ 12.5 ಸೆಂ.ಮೀ. (5. ಅಂ.)ಗೆ ಕಡಿಮೆ ಇಲ್ಲದ ಸುತ್ತಳತೆಯ ಅಟ್ಟಣಿಗೆ ಕಂಬವನ್ನು ಕತ್ತರಿಸುವುದರಲ್ಲಿ ನಿಪುಣತೆಯನ್ನು ಪ್ರದರ್ಶಿಸಬೇಕು.
2. ವಿವಿಧ ಬಗೆಯ ಹಗ್ಗಗಳು, ಅವುಗಳ ಹೊಸೆಯುವಿಕೆ, ಗಾತ್ರ, ಅವುಗಳನ್ನು ಸಂಗ್ರಹಿಸಿಡುವುದು ಮತ್ತು ರಕ್ಷಣೆ ಬಗ್ಗೆ ಪ್ರಾಥಮಿಕ ಅರಿವು ಇರಬೇಕು.
3. ಪ್ರಥಮ ಸೋಪಾನ್ ಮತ್ತು ದ್ವಿತೀಯ ಸೋಪಾನ್ ಪರೀಕ್ಷೆಗಳ ಗಂಟುಗಳ ಜೊತೆಗೆ ಈ ಕೆಳಗಿನ ಗಂಟುಗಳನ್ನು ಹಾಕಬೇಕು ಮತ್ತು ಅವುಗಳ ಉಪಯೋಗ ತಿಳಿದಿರಬೇಕು. ಕುಣಿಯಲ್ಲಿ ಕುಣಿಕೆ ಗಂಟು (bowline-on-bight), ಮಾರ್ಜಾಲ ಪಾದ (catspaw), ಇಮ್ಮೂಲೆಗಂಟು (double sheet bend) ಏಣಿ ಗಂಟು (manharness knot) ಏಣಿಮುಲಕು (marline or lever hitch) ಜಾರು ಮಲಕು (draw or highway man's hitch), ಬೆಸ್ತರ ಬಾಗು (fisherman's bend).
4. ಎಂಟರ ಕಟ್ಟನ್ನು ಬಳಸಿ ಒಂದು ದಂಡಕ್ಕೆ ಬಡಗಿಯನ್ನು ಕಟ್ಟಬೇಕು ಮತ್ತು

ಬೇರೆ ಬೇರೆ ವಿವಿಧ ಎರಡು ಬಗೆಯ ಬಿಗಿ ಹಿಡಿತಗಳನ್ನು ಭೂಮಿಯನ್ನನುಸರಿಸಿ ತಯಾರಿಸಬೇಕು.

5. ಒಂದು ಮಾದರಿ ಸೇತುವೆ ಅಥವಾ ಎತ್ತು ಯಂತ್ರ ಮತ್ತು ಏಣಿ ಕಟ್ಟಬೇಕು.
6. ಶಿಬಿರ ಪಾಕಶಾಲೆ ನಿರ್ಮಿಸಬೇಕು ಅಥವಾ ತನ್ನನ್ನು ಸಾಗಿಸಬಲ್ಲ ತೇಲುದೋಣಿ ತಯಾರಿಸಬೇಕು.
7. ಮೂವರಿಗೆ ಅವಕಾಶವುಳ್ಳ ಶಿಬಿರ ಡೇರೆ ಅಥವಾ ಗುಡಿಸಲು ನಿರ್ಮಿಸಬೇಕು.
8. ಪ್ರಥಮ ಸೋಪಾನ್ ಮತ್ತು ದ್ವಿತೀಯ ಸೋಪಾನ್‌ನ ಅಗ್ರಗಾಮಿ ಪರೀಕ್ಷೆಗಳಲ್ಲಿ ಪುನರುತ್ತೀರ್ಣನಾಗಬೇಕು.
9. ಒಂಟಿ ರಾಟೆ ಮತ್ತು ಜೋಡಿ ರಾಟೆಗಳನ್ನು ಬಳಸಿ ಬ್ಲಾಕ್ ಮತ್ತು ಟ್ಯಾಕಲ್ ತಯಾರಿಸಲು ತಿಳಿದಿರಬೇಕು.

**74. ಕೊಳಾಯಿ ದುರಸ್ತಿಗಾರ (Plumber)**



1. ಲೋಹದ ಅಥವಾ ಪಿ.ವಿ.ಸಿ. ಕೊಳವೆಗಳನ್ನು ಕತ್ತರಿಸಲು ಮತ್ತು ಸೇರಿಸಲು ತಿಳಿದಿರಬೇಕು ಹಾಗೂ ಪ್ರದರ್ಶಿಸಬೇಕು.
2. ಕೊಳಾಯಿ ಕಾರ್ಯದಲ್ಲಿ ಬಳಸುವ ವಿವಿಧ ಉಪಕರಣಗಳ ಅರಿವಿರಬೇಕು
3. ಕಟ್ಟಿಕೊಂಡಿರುವ ಮೋರಿ, ಕೊಳವೆಗಳನ್ನು ಸ್ವಚ್ಛಗೊಳಿಸುವುದನ್ನು ಪ್ರದರ್ಶಿಸಬೇಕು.
4. ಇಂಗುತೊಟ್ಟಿಯ ಬಳಕೆಯ ವಿಧಾನ ತಿಳಿದಿರಬೇಕು.
5. ಕೊಳಾಯಿ ವಾಷರ್ ಬದಲಿಸಬೇಕು ಮತ್ತು ಗೋಲ ಕವಾಟ (ball cock)ವನ್ನು ಸರಿಪಡಿಸಬೇಕು.
6. ಕೈ ಪಂಪನ್ನು ದುರಸ್ತಿ ಮಾಡಬೇಕು.
7. ನೀರಿನ ಕೊಳವೆಯು ಒಡೆದಿರುವ ಸಮಯದಲ್ಲಿ ತಕ್ಷಣ ಮಾಡಬೇಕಾದ ಕ್ರಮಗಳನ್ನು ತಿಳಿದಿರಬೇಕು.

**75. ಕೋಳಿ ಸಾಕುವವ (Poultry farmer)**

1. ಸ್ವಾಭಾವಿಕ ಮತ್ತು ಕೃತಕ ವಿಧಾನದಲ್ಲಿ ಮರಿ ಮಾಡುವುದುದನ್ನು ತಿಳಿದಿರಬೇಕು. ಸ್ವಾಸ್ಥ್ಯ ಕೋಳಿ ಮನೆಗಳ ಬಗ್ಗೆ ತಿಳಿದಿರಬೇಕು. ಕೋಳಿಗಳನ್ನು ಸಾಕುವಿಕೆ, ಆಹಾರ ಕೊಡುವಿಕೆ ತಿಳಿದಿರಬೇಕು. ಕೋಳಿಗಳನ್ನು ಮೇಜಿಗಾಗಿ ಅಥವಾ ಮಾರುಕಟ್ಟೆಗಾಗಿ ಕೊಲ್ಲುವುದು

ಹಾಗೂ ಸ್ವಚ್ಛಗೊಳಿಸುವುದನ್ನು ತಿಳಿದಿರಬೇಕು.



2. ಕೋಳಿಗಳನ್ನು ಮತ್ತು ಮೊಟ್ಟೆಗಳನ್ನು ಮಾರುಕಟ್ಟೆಗಾಗಿ ಅಣಿಗೊಳಿಸಬೇಕು.
3. 3 ತಿಂಗಳ ಕಾಲ, 3 ಕೋಳಿಗಳನ್ನು ಒಪ್ಪಿಗೆಯಾಗುವಂತೆ ಸಾಕಬೇಕು ಹಾಗೂ ಅವಧಿಯಲ್ಲಿ ದಿನಚರಿ ದಾಖಲೆ ಇಡಬೇಕು.
4. ಮೂರು ಬಗೆಯ ಕೋಳಿಸಾಕಣೆಯನ್ನು ಗುರುತಿಸಬೇಕು.
5. ಕೋಳಿಗಳ ಮೂರು ರೋಗಗಳ ಹಾಗೂ ಅವುಗಳ ಚಿಕಿತ್ಸೆಯ ಬಗ್ಗೆ ತಿಳಿದಿರಬೇಕು.

## 76. ಮುದ್ರಣಕಾರ (Printer)



1. ಒಂದು ಕರಪತ್ರ ಅಥವಾ ಒಂದು ಬೆರಳಚ್ಚು ನಮೂನೆ ಪುಟವನ್ನು ತಾನೇ ಸ್ವತಃ ಜೋಡಿಸಬೇಕು
2. ಅಚ್ಚುಮೊಳೆಗಳ ಪಾಯಿಂಟ್ ಪದ್ಧತಿ ತಿಳಿದಿರಬೇಕು. ಆರು ಸಾಮಾನ್ಯ ವಿಧದ ಅಚ್ಚು ಮೊಳೆಗಳನ್ನು ತಿಳಿದಿರಬೇಕು.
3. ಮುದ್ರಕರ ತಿದ್ದುಪಡಿ ಚಿಹ್ನೆಗಳನ್ನು ತಿಳಿದಿರಬೇಕು. ವಿವಿಧ ರೀತಿಯ ಕಾಗದದ ಹಾಳೆಗಳ ಗಾತ್ರ ಹಾಗೂ ಅಳತೆಗಳನ್ನು ತಿಳಿದಿರಬೇಕು.
4. ತನ್ನ ಮಾತೃಭಾಷೆಯಲ್ಲಿ ಒಂದು ಪುಟದಷ್ಟು ವಿಷಯವನ್ನು ಜೋಡಿಸಬೇಕು ಹಾಗೂ ಎರಡು ಪುಟಗಳಷ್ಟು ವಿಷಯಗಳ ಕರಡುಪ್ರತಿ ತಿದ್ದಬೇಕು.

## 77. ಸಾರ್ವಜನಿಕ ಆರೋಗ್ಯಕಾರ್ಯಕರ್ತ (Public healthy man)



1. ಈ ಕೆಳಗಿನ ಖಾಯಿಲೆಗಳ ಹರಡುವಿಕೆಯ ವಿಧಾನಗಳನ್ನು ತಿಳಿದಿರಬೇಕು. ಕ್ಷಯ (Tuberculosis), ಗಂಟಲುರೋಗ (Diphtheria), ದಡಾರ (Measles), ಗದ್ದಕಟ್ಟು (Mumps) ನಾಯಿಕೆಮ್ಮು (Whooping cough), ಸೀತಾಳ ಸಿಡುಬು (Chicken pox), ವಿಷಮಶೀತಜ್ವರ (Typhoid fever), ಆಮಶಂಕೆ (Dysentery) ಅತಿಸಾರ (Diarrhoea), ಸಿಡುಬು (Small-pox), ಮಲೇರಿಯಾ (Malaria), ಗಜಕರ್ಣ (Ringworm), ಕಜ್ಜಿ (Scabies), ಪ್ಲೇಗ್ (Plague), ಕಾಲರಾ (Cholera). ನೈರ್ಮಲ್ಯ ಪ್ರಾಧಿಕಾರದವರು ಈ

ಖಾಯಿಲೆಗಳ ಹರಡುವಿಕೆಯನ್ನು ತಡೆಗಟ್ಟಲು ಕೈಗೊಳ್ಳುವ ಕ್ರಮಗಳ ಬಗ್ಗೆ ತಿಳಿದಿರಬೇಕು. ಈ ಖಾಯಿಲೆಗಳ ಸೋಂಕು ತಗುಲಿದಾಗ ವೈಯಕ್ತಿಕವಾಗಿ ಪಾಲಿಸಬೇಕಾದ ಕ್ರಮಗಳನ್ನು ತಿಳಿದಿರಬೇಕು.

**ಸೂಚನೆ :** ಅಣುಜೀವಶಾಸ್ತ್ರೀಯ ಮತ್ತು ವೈದ್ಯಕೀಯ ವಿವರಗಳು ಅನವಶ್ಯಕ.

2. ಒಂದು ಕೊಠಡಿ ಮತ್ತು ಅದರ ವಸ್ತುಗಳನ್ನು ಸೋಂಕುರಹಿತವನ್ನಾಗಿ ಮಾಡುವ ವಿಧಾನವನ್ನು ವಿವರಿಸಬೇಕು. ಸೊಳ್ಳೆ, ಇಲಿ, ತಿಗಣೆ ಮತ್ತು ನೊಣಗಳ ನಿವಾರಣಾ ವಿಧಾನಗಳನ್ನು ತಿಳಿದಿರಬೇಕು.
3. ತ್ಯಾಜ್ಯವಸ್ತುಗಳ ವಿಲೇವಾರಿಗಾಗಿ ತನ್ನ ಪರಿಸರದಲ್ಲಿ ಬಳಸಲಾಗುವ ವಿಧಾನಗಳನ್ನು ತಿಳಿದಿರಬೇಕು.
4. ತ್ಯಾಜ್ಯವಸ್ತುಗಳ ವಿಲೇವಾರಿ ಬಗ್ಗೆ ಐದು ಕುಟುಂಬಗಳಿಗೆ ತಿಳಿಯಹೇಳಬೇಕು.
5. ಅಡಿಗೆ ಮನೆ, ಶೌಚಾಲಯ, ತೊಳೆಯುವ ಮತ್ತು ಬಟ್ಟೆ ಒಗೆಯುವ ಪ್ರದೇಶ (washing place) ಕುಡಿಯುವ ನೀರು ಮತ್ತು ಆಹಾರ ಸಂಗ್ರಹಣೆಗಳಿಗೆ ಸಂಬಂಧಿಸಿದಂತೆ ಶಿಬಿರ ನೈರ್ಮಲ್ಯದ ಬಗ್ಗೆ ತಿಳಿದಿರಬೇಕು.

## 78. ಓದುಗ (Reader)

1. ಇವುಗಳನ್ನು ಓದಿರಬೇಕು.



   - i. ಪ್ರಸಿದ್ಧ ಭಾರತೀಯರ ಜೀವನ ಚರಿತ್ರೆಯ ಎರಡು ಪುಸ್ತಕಗಳು.
   - ii. ಸಂರಕ್ಷಣೆ / ಮರಗಳು / ಪಕ್ಷಿಗಳು / ಮಾಲಿನ್ಯ / ನಿಸರ್ಗ ಇತ್ಯಾದಿಗಳ ಕುರಿತಾದ ಎರಡು ಪುಸ್ತಕಗಳು.
   - iii. ತನ್ನ ಧರ್ಮಸಂಬಂಧವಾದ ಎರಡು ಪುಸ್ತಕಗಳು.
   - iv. ಭಾರತೀಯ ಸಂಸ್ಕೃತಿ ಮತ್ತು ಪರಂಪರೆಯ ಕುರಿತಾದ ಎರಡು ಪುಸ್ತಕಗಳು.
   - v. ಭಾರತದ ಸ್ವಾತಂತ್ರ್ಯದ ಇತಿಹಾಸ ಕುರಿತಾದ ಎರಡು ಪುಸ್ತಕಗಳು.
   - vi. ಅವರೇ ಇಷ್ಟಪಟ್ಟ, ಕುರುಡರು ಅಥವ ವೃದ್ಧರಿಗಾಗಿ ಬರೆದ ಒಂದು ಪುಸ್ತಕ.
   - vii. ಅವರೇ ಇಷ್ಟಪಟ್ಟ ಯಾವುದೇ ಮತ್ತೆರಡು ಪುಸ್ತಕಗಳು.

   ಇವುಗಳನ್ನು ಓದಿರುವ ಬಗ್ಗೆ ಪರೀಕ್ಷಕರನ್ನು ತೃಪ್ತಿಪಡಿಸಬೇಕು.
2. ಒರಟಾಗಿ ಬಳಸುವುದು, ತೇವಾಂಶ, ಗೆದ್ದಲು, ಶಲಭ (moths) ಇವುಗಳಿಂದುಂಟಾಗುವ ಹಾನಿಯ ಬಗ್ಗೆ ತಿಳಿದಿರಬೇಕು.

3. ಪುಸ್ತಕಗಳನ್ನು ಪುನರ್ ವ್ಯವಸ್ಥೆಗೊಳಿಸಲು ಅಥವಾ ಪುಸ್ತಕ ಪಟ್ಟಿಯನ್ನು ಬರೆಯಲು ಗ್ರಂಥಪಾಲಕರಿಗೆ ಸಹಾಯ ಮಾಡಬೇಕು.

**79. ರಕ್ಷಕ (Rescuer)**

1. ಈಜುಗಾರ ಪದಕದಲ್ಲಿ ಉತ್ತೀರ್ಣನಾಗಿರಬೇಕು ಅಥವಾ ಉತ್ತೀರ್ಣನಾಗಬೇಕು.




2. ಅಂಗಿ ಮತ್ತು ಧೋತಿ / ಟ್ರೌಜರ್ಸ್ ತೊಟ್ಟು ನೀರಿನಲ್ಲಿ ನಾಲ್ಕು ಬಗೆಯ ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಬೇಕು ಮತ್ತು ಮುಳುಗುತ್ತಿರುವ ವ್ಯಕ್ತಿಯ ಹಿಡಿತದಿಂದ ಬಿಡಿಸಿಕೊಳ್ಳುವ ಮೂರು ವಿಧಾನಗಳನ್ನು ತಿಳಿದಿರಬೇಕು. ಮುಳುಗುತ್ತಿರುವ ವ್ಯಕ್ತಿಯೂ ರಕ್ಷಕನೂ ಒಂದೇ ಪ್ರಮಾಣದ ವ್ಯಕ್ತಿಗಳಾಗಿರಬೇಕು. ಮೂರು ರಕ್ಷಣಾ ವಿಧಾನಗಳಲ್ಲೊಂದಾರಲ್ಲೂ ಆ ವ್ಯಕ್ತಿಯನ್ನು ಕನಿಷ್ಠ 9.1 ಮೀ. (10 ಗಜಗಳ) ದೂರ ಒಯ್ಯಬೇಕು.
3. 1.5 ಮೀ. (5 ಅಡಿ) ಆಳದವರೆಗೆ ಮುಳುಗುಹಾಕಿ, 2.3 ಕಿ.ಗ್ರಾಂ. (5 ಪೌಂ.)ಗೆ ಕಡಿಮೆ ಇಲ್ಲದ ತೂಕದ ಕಲ್ಲು ಅಥವಾ ಇಟ್ಟಿಗೆ ಅಥವಾ ಕಬ್ಬಿಣವನ್ನು ಮೇಲೆ ತರಬೇಕು.
4. ಬಾಯಿಂದ ಬಾಯಿಗೆ ಪುನಶ್ವಾಸವನ್ನು (ಎಂ.ಎಂ.ಆರ್.) ಪ್ರದರ್ಶಿಸಬೇಕು.
5. 45.7 ಮೀ. (50 ಗಜ) ದೂರ ಈಜಬೇಕು ಮತ್ತು ನೆಲಮುಟ್ಟುವುದಕ್ಕಿಂತ ಮುನ್ನ ಬಟ್ಟೆ ಕಳಚಬೇಕು.
6. 91 ಮೀ. ದೂರದ ಗುರಿಗೆ ಜೀವರಕ್ಷಣೆ ಹಗ್ಗವನ್ನು ಎಸೆಯಬೇಕು. ಇದರಲ್ಲಿ 4 ಪ್ರಯತ್ನಗಳಲ್ಲಿ, ಹಗ್ಗವು ಗುರಿಯಿಂದ ಕನಿಷ್ಠ 13.6 ಮೀ. ಅಂತರದವರೆಗೆ ಮುಟ್ಟಬೇಕು.
7. ರೋಗಿಗಳನ್ನು ಒಯ್ಯುವ ಕನಿಷ್ಠ ಎರಡು ವಿಧಾನಗಳನ್ನು ಪ್ರದರ್ಶಿಸಬೇಕು.

**80. ಗ್ರಾಮೀಣ ಅಭಿಯಂತ (Rural Engineer)**



1. ಗ್ರಾಮಗಳಲ್ಲಿ ದೊರಕುವ ವಸ್ತುಗಳನ್ನು ಬಳಸಿ ಅಗ್ಗದ ಗುಡಿಸಲುಗಳನ್ನು ಕಟ್ಟುವ ವಿಧಾನವನ್ನು ತಿಳಿದಿರಬೇಕು.
2. ಹಳ್ಳ(ತೊರೆ)ಗಳ ಮೇಲೆ ಸುಧಾರಿತ ಸೇತುವೆ ತಯಾರಿಸಲು ತಿಳಿದಿರಬೇಕು.

3. ವಿವಿಧ ಬಗೆಯ ಗ್ರಾಮೀಣ ಶೌಚಾಲಯ ಮತ್ತು ಮೂತ್ರಾಲಯಗಳ ಬಗ್ಗೆ ತಿಳಿದಿರಬೇಕು.
4. ಇಂಗುಗುಂಡಿಗಳನ್ನು ತಯಾರಿಸಲು ತಿಳಿದಿರಬೇಕು.
5. ಗೊಬ್ಬರ ಹಾಗೂ ಕಸದ ಗುಂಡಿಗಳನ್ನು ತಿಳಿದಿರಬೇಕು.
6. ಹೊಗೆ ರಹಿತ ಒಲೆ (ಮಗನ್ ಚೂಲಾ) ತಯಾರಿಸಲು ತಿಳಿದಿರಬೇಕು.
7. ರಸ್ತೆಗಳನ್ನು ದುರಸ್ತಿ ಮಾಡಲು ಮತ್ತು ಸುಸ್ಥಿತಿಯಲ್ಲಿಡಲು ತಿಳಿದಿರಬೇಕು.
8. ಪ್ರಾಣಿಗಳ ಸಗಣಿಯಿಂದ, ಅಡಿಗೆ ಮಾಡಲು ಬರುವ ಇಂಧನ ಅನಿಲ ತಯಾರಿಸುವ ವಿಧಾನ ತಿಳಿದಿರಬೇಕು.
9. ಮೇಲ್ಕಾಣಿಸಿದವುಗಳ ಪೈಕಿ ಕನಿಷ್ಠ ಐದು ಕಾರ್ಯಗಳಲ್ಲಿ ಭಾಗವಹಿಸಿರಬೇಕು. ಮತ್ತು ಕನಿಷ್ಠ ನಾಲ್ಕರ ಪ್ರಾಯೋಗಿಕ ಪ್ರದರ್ಶನ ನೀಡಬೇಕು. ಅವುಗಳಲ್ಲಿ 8 ನೆಯ ಅಂಶವು ಕಡ್ಡಾಯವಾದುದು.

**81. ಗ್ರಾಮೀಣ ಕಾರ್ಯಕರ್ತ (Rural Worker)**



1. ಒಂದು ಗ್ರಾಮದ ವಿಸ್ತೀರ್ಣ, ಜನಸಂಖ್ಯೆ, ಕಸಬು, ಉತ್ಪನ್ನಗಳು, ಬಾವಿ ಮತ್ತಿತರ ಜಲ ಮೂಲಗಳು, ಸಂಪ್ರದಾಯಗಳು, ಶಾಲಾ ವಯಸ್ಸಿನ ಮಕ್ಕಳು, ಅಕ್ಷರಸ್ಥರು ಹೀಗೆ ವಿವರವಾದ ಮಾಹಿತಿ ಹೊಂದಿರಬೇಕು.
2. ಗ್ರಾಮದ ಆರೋಗ್ಯ ರಕ್ಷಣಾ ವ್ಯವಸ್ಥೆ (ವಿಶೇಷವಾಗಿ ತಡೆಗಟ್ಟಬಹುದಾದ ರೋಗಗಳಿಗೆ ಸಂಬಂಧಿಸಿದಂತೆ) ಆಡಳಿತ ವ್ಯವಸ್ಥೆ, ಗ್ರಾಮ ಪಂಚಾಯತಿ ಬಗ್ಗೆ ತಿಳಿದಿರಬೇಕು.
3. ಕನಿಷ್ಠ ಆರು ತಿಂಗಳ ಕಾಲ ಗ್ರಾಮದಲ್ಲಿ ನಿರಂತರ ಉಪಯೋಗಕರವಾದ ಸೇವೆಯನ್ನು ಮಾಡಿದ ಬಗ್ಗೆ ದಾಖಲೆ ನೀಡಬೇಕು. (ಸಾಕ್ಷರತೆ, ವಯಸ್ಕರ ಶಿಕ್ಷಣ, ಪಾಕೀಜು ವ್ಯವಸ್ಥೆ, ಸ್ವಚ್ಛತೆ, ಕೃಷಿ, ಕೂಲಿ ಕಾರ್ಯ, ಮದ್ಯಪಾನ ನಿಷೇಧ, ಆಟಗಳು ಇತ್ಯಾದಿ)

ಅಥವಾ

ಒಂದು ಗ್ರಾಮೀಣ ಕೂಲಿ ಶಿಬಿರದಲ್ಲಿ ಕನಿಷ್ಠ 15 ದಿನಗಳ ಕಾಲ ಕಾರ್ಯನಿರ್ವಹಿಸಬೇಕು.

4. ಕುಷ್ಠರೋಗ ತಪಾಸಣೆಯಲ್ಲಿ ಭಾಗವಹಿಸುವಂತೆ ಕನಿಷ್ಠ 50 ಮಂದಿಗೆ ಸಹಾಯ ಮಾಡಬೇಕು.

5. ಕನಿಷ್ಠ 20 ಮಕ್ಕಳಿಗೆ ರೋಗ ನಿರೋಧಕ ಲಸಿಕೆ ಹಾಕಿಸಿಕೊಳ್ಳಲು ಸಹಾಯ ಮಾಡಬೇಕು.

6. "ಮೌಖಿಕ ಪುನರ್ ಜಲೀಕರಣ ತಂತ್ರ" (oral re-hydration technique)ವನ್ನು ಕನಿಷ್ಠ 6 ತಾಯಂದಿರಿಗೆ ಕಲಿಸಬೇಕು.

7. ತನ್ನ ಗ್ರಾಮ / ಮೊಹಲ್ಲಾ ಕೊಳಚೆ ಪ್ರದೇಶದಲ್ಲಿ ಕಣ್ಣು ರಕ್ಷಣೆ / ದಂತ ರಕ್ಷಣೆ ಪ್ರಚಾರಕಾರ್ಯ ಏರ್ಪಡಿಸಬೇಕು.

8. ಆಮಶಂಕೆ, ಅತಿಸಾರ ಇವುಗಳ ನಿರ್ವಹಣೆ ಅಥವಾ ಮಹಿಳೆಯರ ಹೇನುನಿವಾರಣೆ ಬಗ್ಗೆ ನೆರೆಯವರಿಗೆ ಕಲಿಸಬೇಕು.

**82. ಸುರಕ್ಷತಾ ಅರಿವು (Safety Knowledge)**

**ಅ. ವ್ಯಕ್ತಿಗತ ಪರೀಕ್ಷಾಂಶಗಳು –**

1. **"ಸುರಕ್ಷತೆಗೆ ಅದ್ಯತೆ"** ಇದರ ಮಹತ್ವವನ್ನು ತಿಳಿದಿರಬೇಕು, ಹೆಚ್ಚಿನ ಮತ್ತು ಉತ್ತಮ ಸಾಹಸಕ್ಕಾಗಿ ಸುರಕ್ಷತೆ ಎಂಬುದರ ಅರ್ಥವನ್ನು ತಿಳಿದಿರಬೇಕು.



2. **ನಡಿಗೆ :** ರಸ್ತೆ ನಿಯಮ, ಕಲ್ಲುಹಾಸಿನ ದಾರಿಯ ಮೇಲೆ ನಡೆಯುವುದು.

3. **ರಸ್ತೆ, ದಾಟುವುದು :** ರಸ್ತೆ ಕೂಡುವಿಕೆಗಳಲ್ಲಿ ದಾಟುವ ಮೂಲ ನಿಯಮಗಳು, ಪಾದಚಾರಿಗಳ ದಾಟುದಾರಿ ಇತ್ಯಾದಿ. ರಸ್ತೆ ಸಂಚಾರ ನಿಯಂತ್ರಣ ಮತ್ತು ರಸ್ತೆ ದೀಪ ನಿಯಂತ್ರಣ ಸಂಕೇತಗಳನ್ನು ಅನುಸರಿಸಿ ರಸ್ತೆ ದಾಟುವುದು.

4. **ಸಾರ್ವಜನಿಕ ಸೇವಾ ವಾಹನಗಳು :** ಟ್ರಾಂಗಳು, ಬಸ್ಸುಗಳು, ಕಾರುಗಳು, ರೈಲ್ವೆ ಬೋಗಿಗಳಿಂದ ಇಳಿಯುವುದು ಹಾಗೂ ಹತ್ತುವುದು.

5. **ವಾಹನ ಚಾಲಕರ ಬಗ್ಗೆ ಪ್ರಯಾಣಿಕರ ಕರ್ತವ್ಯಗಳು :** ಹಿಂಬದಿಯ ಮತ್ತು ಪಕ್ಕದ ದೃಶ್ಯವನ್ನು ಅಡ್ಡಿಪಡಿಸದೆ ಇರುವುದು, ಕೈ ಸಂಕೇತಗಳಿಗೆ ಅಡ್ಡಿ ಪಡಿಸದೆ ಇರುವುದು, ನಿಯಂತ್ರಣಗಳು ಮತ್ತು ಬಾಗಿಲು ಹಾಕುವುದರಲ್ಲಿ ಅಡ್ಡಿಪಡಿಸದಿರುವುದು. ರಸ್ತೆಯ ಬದಿಯಲ್ಲಿ ಇಳಿಯುವುದು.

**ಆ. ಗುಂಪು ಪರೀಕ್ಷಾಂಶಗಳು**

6. **ಶಾಲಾಸುರಕ್ಷತಾ ಪೆಟ್ರೋಲು :** ವಿದ್ಯಾರ್ಥಿಗಳಿಗೆ ಶಾಲೆಯಿಂದ

ಮತ್ತು ಶಾಲೆಗೆ ಅಧಿಕೃತ ಮಾರ್ಗಗಳಲ್ಲಿ ರಸ್ತೆ ದಾಟಲು ಮಾರ್ಗ ದರ್ಶನ ಮಾಡುವುದು.

7. **ಸಂಚಾರ ಆಟ :** ರಸ್ತೆ ಬಳಸುವುದರ ಸರಿಯಾದ ನಡವಳಿಕೆಗಳನ್ನು ನಾಟಕದ ರೂಪದಲ್ಲಿ ಕಲಿಸುವುದು.

8. **ಗೃಹಸುರಕ್ಷತೆ :** ಬೀಳುವಿಕೆಯನ್ನು ತಡೆಗಟ್ಟುವುದು, ಬೆಂಕಿಯಿಂದ ಸುಡುವಿಕೆ, ಬೆಂದಗಾಯ, ಇತ್ಯಾದಿಗಳ ಅರಿವು, ಅಪಾಯಕಾರಿ ರೇಡಿಯೋ ಸ್ಥಾವರಗಳ ಬಗ್ಗೆ ಗೃಹತಪಾಸಣೆ.

9. **ಕೈಗಾರಿಕಾ ಸುರಕ್ಷತೆ :** ಉಪಕರಣಗಳ, ಯಂತ್ರಗಳ, ಉಡುಗೆ ತೊಡುಗೆಗಳ ಸುರಕ್ಷಿತ ಬಳಕೆ ಮತ್ತು ವ್ಯವಸ್ಥಿತ ರೀತಿಯ ಜೋಡಣೆ

10. **ಇತರೆ ಸುರಕ್ಷತೆ :** ಬಂದೂಕುಗಳ ಸುರಕ್ಷತೆ, ಬೆಂಕಿ ಹೊತ್ತಿರುವ ವ್ಯಕ್ತಿಗಳನ್ನು ರಕ್ಷಿಸುವುದು, ಅಗ್ನಿಶಾಮಕದಳಕ್ಕೆ ಕರೆಕೊಡುವುದು, ಗಾಳಿಪಟಹಾರಿಸುವುದು ಮತ್ತು ಸಿಡಿಲು ಬಡಿದಾಗ.

## 83. ಮಾರಾಟಗಾರ (Sales man)



1. ಐದು ಚಿಲ್ಲರೆ ಮಾರಾಟದ ಮಳಿಗೆಗಳಿಂದ ಒಂದೊಂದು ವ್ಯಾಪಾರದ ಸರಕಿನ ಮಾಲನ್ನು ವಿಶ್ಲೇಷಿಸಬೇಕು. ಹೀಗೆ ವಿಶ್ಲೇಷಿಸಿದ ಪ್ರತಿ ಮಾಲೂ ಸಹ ತಯಾರಕರಿಂದ ಗ್ರಾಹಕನಿಗೆ ತಲುಪುವಷ್ಟರಲ್ಲಿ ಜರುಗುವ ಪ್ರಕ್ರಿಯೆಗಳ ವರದಿಯನ್ನು ಬರೆಯಬೇಕು.

2. ತಯಾರಕರ ಮತ್ತು ದಲ್ಲಾಳಿಗಳ ನಡುವೆ: ದಲ್ಲಾಳಿ ಮತ್ತು ಚಿಲ್ಲರೆ ವ್ಯಾಪಾರಿಯ ನಡುವೆ: ತಯಾರಕರು ಮತ್ತು ಚಿಲ್ಲರೆ ವ್ಯಾಪಾರಿಗಳ ನಡುವೆ; ಮಾರಾಟಗಾರನ ಪಾತ್ರವನ್ನು ವಿವರಿಸಬೇಕು.

3. 150 ರೂ.ಗಳಿಗೆ ಮೀರಿದ ಬೆಲೆಯ ಸರಕನ್ನು ಮಾರಾಟಮಾಡಬೇಕು. ಇದನ್ನು ಮಾರಾಟಮಾಡಲು ಜನರನ್ನು ಪ್ರೇರೇಪಿಸಲು ಬಳಸಿದ ತಂತ್ರಗಳು, ಮಾರಾಟದ ವಿರೋಧವನ್ನು ನಿವಾರಿಸಿಕೊಂಡ ವಿಧಾನಗಳನ್ನು ಒಳಗೊಂಡ ಮಾರಾಟ ಅನುಭವವನ್ನು ವಿವರಿಸಬೇಕು.

4. ತಾನೇ ತಯಾರಿಸಿದುದನ್ನು ಅಥವಾ ಬೆಳೆದುದನ್ನು ಲಾಭಕ್ಕೆ ಮಾರಬೇಕು, ಸರಿಯಾದ ಮಾರಾಟ ಬೆಲೆಯನ್ನು ನಿಗದಿಗೊಳಿಸುವ ಸಲುವಾಗಿ ಅವಶ್ಯಕ ದಾಖಲೆ ಇಡಬೇಕು ಮತ್ತು ಗಳಿಸಿದ ಲಾಭವನ್ನು ತಿಳಿಸಿಬೇಕು.

5. ಶನಿವಾರದ ಅಪರಾಹ್ನಗಳಲ್ಲಿ ಅಥವಾ ರಜಾ ದಿನಗಳಲ್ಲಿ ಅಥವಾ ಶಾಲಾ ನಂತರದ ಅವಧಿಗಳಲ್ಲಿ 3 ತಿಂಗಳ ಕಾಲ ಮಾರಾಟಗಾರನ ವೃತ್ತಿ

ಮಾಡಬೇಕು. ಅವನು ವ್ಯವಹರಿಸುವ ವಸ್ತುಗಳ ಮಾರಾಟದಲ್ಲಿನ ಅವಶ್ಯಕತೆಗಳೇನು ಎಂಬುದನ್ನು ತಿಳಿಸಬೇಕು.

6. ವ್ಯಾಪಾರಿ ಸಂಸ್ಥೆಗೆ, ಸಮವಸ್ತ್ರದಲ್ಲಿ ಭೇಟನೀಡಿ ಉತ್ಪನ್ನಗಳು ಹೇಗೆ ಮಾರಾಟವಾಗುತ್ತವೆ ಎಂಬುದನ್ನು ಕಲಿಯಬೇಕು. ಮೊದಲೇ ಸಿದ್ಧ ಪಡಿಸಿದ ಕನಿಷ್ಠ 10 ಪ್ರಶ್ನೆಗಳನ್ನು ತನ್ನೊಡನೆ ಒಯ್ಯಬೇಕು.

7. ಯಶಸ್ವಿ ಮಾರಾಟಗಾರನ ಐದು ಮೂಲಭೂತ ಅವಶ್ಯಕತೆಗಳನ್ನು ಹೆಸರಿಸಬೇಕು.

8. ತನ್ನ ಸ್ಥಳದ ಯಶಸ್ವಿ ಹಾಗೂ ಪ್ರಯೋಗಶೀಲ ಮಾರಾಟಗಾರನ ಬಳಿ ಹೋಗಿ ಯಾವ ಕಾರಣಗಳಿಗಾಗಿ ಅವನು ಮಾರಾಟವನ್ನು ಜೀವನೋಪಾಯವನ್ನಾಗಿ ಪರಿಗಣಿಸಿದ್ದಾನೆ ಎಂಬುದನ್ನು ತಿಳಿಯಬೇಕು. ಮಾರಾಟ ಮಾಡುವುದು ಜೀವನ ಪರಮಾವಧಿ ಎಂಬ ಬಗ್ಗೆ ಆ ಮಾರಾಟಗಾರನು ಹೇಳಿದ ವಿಷಯಗಳನ್ನು ಅಥವ ತನ್ನ ನಿರ್ಧಾರಗಳನ್ನು 500 ಅಥವಾ ಹೆಚ್ಚು ಪದಗಳಲ್ಲಿ ವಿವರಿಸಬೇಕು.

9. i. ಯಾವುದೇ ಒಂದು ವಸ್ತುವಿನ ಬಗೆಗಿನ ಪ್ರಾಮಾಣಿಕತೆಯು. ಒಳ್ಳೆಯ ಮಾರಾಟದ ಪ್ರಮುಖ ಅವಶ್ಯಕತೆಗಳಲ್ಲೊಂದು, ಹೇಗೆ?
   ii. ತನ್ನ ಒಡೆಯನಿಗಾಗಿ ಪ್ರತಿ ಮಾರಾಟಗಾರನೂ ಏನನ್ನು ಮಾರುತ್ತಾನೆ.
   iii. ಭಾವೀ ಗ್ರಾಹಕರಿಗೆ ತೋರುವ ಸೌಜನ್ಯತೆಯು ಹೇಗೆ ಮಾರಾಟಕ್ಕೆ ಸಹಕಾರಿಯಾಗುತ್ತದೆ? ಈ ಅಂಶಗಳನ್ನು ವಿವರಿಸಬೇಕು.

### 84. ಪಾಕೀಜು ಪ್ರವರ್ತಕ (Sanitation Promotier)



ನಿರ್ದಿಷ್ಟ ಸ್ಥಳದಲ್ಲಿ ಸಮೀಕ್ಷೆ ನಡೆಸಿ, ಈ ಕೆಳಗಿನ ರೀತಿಗಳಲ್ಲಿ ಜನರಿಗೆ ಸಹಾಯ ಮಾಡಬೇಕು.

1. i. ಕುಡಿಯಲು ಸ್ವಚ್ಛ ನೀರಿನ ಬಳಕೆ
   ii. ನೀರನ್ನು ಸೋಸುವ, ಕುದಿಸುವ ಮತ್ತು ಸಂಗ್ರಹಿಸುವ ವಿಧಾನಗಳನ್ನು ಪ್ರದರ್ಶಿಸುವುದು.
   iii. ಇದ್ದಿಲಿನ ನೀರು ಶೋಧಕದ ಬಳಕೆಯನ್ನು ಪ್ರದರ್ಶಿಸುವುದು.

2. ಇಲಿಗಳು ಇತರ ದಂಶಕ ಪ್ರಾಣಿಗಳಿಂದ ಧಾನ್ಯವನ್ನು ರಕ್ಷಿಸುವುದು.

3. ಬೇಯಿಸಿದ ಆಹಾರವನ್ನು, ನೊಣಗಳಿಂದ, ಸೊಳ್ಳೆಗಳಿಂದ, ಧೂಳಿನಿಂದ ರಕ್ಷಿಸುವುದು.

4. ತ್ಯಾಜ್ಯವಸ್ತುವನ್ನು ವಿಲೇವಾರಿ ಮಾಡುವ ಸರಿಯಾದ ವಿಧಾನ ಮತ್ತು ಕಾಂಪೋಸ್ಟ್ ಗುಂಡಿಯ ಉಪಯೋಗ.

5. ಬಯಲಿನಲ್ಲಿ ಶೌಚಕ್ಕೆ ಹೋಗುವುದರ ಅಪಾಯದ ಬಗ್ಗೆ ಸಾರ್ವಜನಿಕರಿಗೆ ಶಿಕ್ಷಣ ನೀಡುವುದು.

6. ಕಡಿಮೆ ಖರ್ಚಿನ ಮತ್ತು ಪರಿಣಾಮಕಾರಿಯಾದ ಶೌಚಾಲಯಗಳನ್ನು ನಿರ್ಮಿಸುವುದು.

7. ತಾನೇ ತಯಾರಿಸಿದ ಕರಪತ್ರಗಳ/ಭಿತ್ತಿ ಪತ್ರಗಳ ಸಹಾಯದಿಂದ 'ಆರೋಗ್ಯ ಲವಣ'ಗಳನ್ನು ಉಪಯೋದಿಸುವ ಬಗ್ಗೆ ಕನಿಷ್ಠ 25 ಮನೆಗಳ ಜನರಲ್ಲಿ ಆಸಕ್ತಿ ಮೂಡಿಸುವುದು.

## 85. ಉತ್ತಮ ವಿದ್ಯಾರ್ಥಿ (Scholar)



1. ಕಳೆದ ಒಂದು ವರ್ಷದಲ್ಲಿ ಕ್ರಮಬದ್ಧ ಹಾಜರಾತಿ ಬಗ್ಗೆ ಸಾಬೀತಾಗಬೇಕು. (ಕನಿಷ್ಠ 60% ಇರಬೇಕು)

2. ಸಾಮಾನ್ಯ ನಡವಳಿಕೆಯು, ಸರಾಸರಿಗಿಂತಲೂ ಉತ್ತಮವಾಗಿರಬೇಕು.

3. ಶಾಲೆಗೆ ಅಥವಾ ಕಾಲೇಜಿಗೆ ಸತತವಾಗಿ ಸಹಾಯ ಮಾಡುವಂತಹ ಮನೋಭಾವವಿರಬೇಕು, ನಿಷ್ಠಾವಂತನಾಗಿರಬೇಕು.

4. ಕಳೆದ ಮೂರು ಕಾಲಾವಧಿ ಪರೀಕ್ಷೆಗಳಲ್ಲಿ ಎಲ್ಲ ವಿಷಯಗಳಲ್ಲಿಯೂ 65% ಕಡಿಮೆ ಇಲ್ಲದಂತೆ ಅಂಕಗಳನ್ನು ಗಳಿಸಿರಬೇಕು.

ತನ್ನ ಪ್ರಾಂಶುಪಾಲರಿಂದ ಅಥವಾ ಶಾಲಾ ಮುಖ್ಯ ಶಿಕ್ಷಕರಿಂದ ಈ ಅಂಶಗಳ ಬಗ್ಗೆ ಪುರಾವೆ ಒದಗಿಸಬೇಕು.

**ಸೂಚನೆ :** ಯಾವುದೇ ಸಂದರ್ಭದಲ್ಲಿ ಮೇಲ್ಕಂಡ ಮಟ್ಟಕ್ಕೆ ಲೋಪವುಂಟಾದರೆ, ಪದಕವನ್ನು ಹಿಂದಕ್ಕೆ ಒಪ್ಪಿಸಬೇಕು.

## 83. ಕಾರ್ಯದರ್ಶಿ (Secretary)



1. ಗುಂಪು ಮತ್ತು ಜಿಲ್ಲಾ ಮಟ್ಟದಲ್ಲಿ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಆಡಳಿತದ ಬಗ್ಗೆ ಸಾಮಾನ್ಯ ತಿಳುವಳಿಕೆ ಹೊಂದಿರಬೇಕು. ಗೌರವಾನ್ವಿತ ಸಭೆ ಮತ್ತು ಪೆಟ್ರೋಲ್ ಸಲಹಾ ಸಭೆಗಳ ಚರ್ಚಾ ವಿಷಯಗಳ ಅರಿವಿರಬೇಕು.

2. ಪರೀಕ್ಷಕರ ಸಮ್ಮುಖದಲ್ಲಿ 250 ಪದಗಳ ಗದ್ಯ

ಭಾಗವನ್ನು ಅಂದವಾದ ಮತ್ತು ಸ್ಪಷ್ಟವಾದ ಬರಹದಲ್ಲಿ ಬರೆಯಬೇಕು.

ಅಥವಾ

ಐದಕ್ಕಿಂತ ಹೆಚ್ಚು ತಪ್ಪುಗಳಿಲ್ಲದಂತೆ, 100 ಪದಗಳನ್ನು ಬೆರಳಚ್ಚು ಮಾಡಬೇಕು. ಹಾಗೂ ಯಂತ್ರವನ್ನು ಸ್ವಚ್ಛಗೊಳಿಸಿ, ರಿಬ್ಬನ್‌ನ್ನು ಬದಲಿಸಬೇಕು.

3. ಸಮಿತಿಯ ವಿಧಾನಗಳನ್ನು ತಿಳಿದಿರಬೇಕು, ಸಭೆಯ ನಡಾವಳಿಗಳನ್ನು ತಯಾರಿಸಲು ಮತ್ತು ನಡಾವಳಿಗಳನ್ನು ಬರೆದುಕೊಳ್ಳಲು ಸಮರ್ಥ ನಿರಬೇಕು.

4. ಸ್ಕೌಟ್‌ನ ಗುಂಪಿನ ಆರ್ಥಿಕ ರಚನೆಯ ತಿಳಿವಳಿಕೆ ಹೊಂದಿರಬೇಕು. ಒಂದು ದಳ ಅಥವಾ ಪೆಟ್ರೋಲ್‌ನ ಆದಾಯ ಖರ್ಚಿನ ಲೆಕ್ಕ ತಯಾರಿಸಬೇಕು. ವೈಯಕ್ತಿಕ ಬ್ಯಾಂಕ್ ಖಾತೆ ವ್ಯವಹರಿಸುವ ವಿಧಾನವನ್ನು ತಿಳಿದಿರಬೇಕು.

5. ಪರೀಕ್ಷಕರು ಆರಿಸಿದ ಒಂದು ವಿಷಯದ ಬಗ್ಗೆ ಪತ್ರ ಬರೆಯಬೇಕು. ಗುಂಪು, ದಳ ಅಥವಾ ಪೆಟ್ರೋಲ್ ಕಾರ್ಯಕ್ರಮದ ಬಗ್ಗೆ ಅದರ ಸದಸ್ಯರಿಗೆ ಅಥವಾ ಸಾರ್ವಜನಿಕರಿಗಾಗಿ ಒಂದು ಆಹ್ವಾನ ಪತ್ರಿಕೆಯ ಕರಡು ಪ್ರತಿ ತಯಾರಿಸಬೇಕು.

6. ತನ್ನ ಪಟಾಲಂ, ಅಥವಾ ಗೌರವಾನ್ವಿತ ಸಭೆ ಅಥವಾ ಬೇರೆ ಯಾವುದಾದರೂ ಸಮಿತಿಯ (ಸ್ಕೌಟಿಂಗ್‌ಗೆ ಸಂಬಂಧಪಟ್ಟಿಲ್ಲದೆಯೂ ಇರಬಹುದು) ಕಾರ್ಯದರ್ಶಿಯಾಗಿ 3 ತಿಂಗಳಕಾಲ ಅಥವಾ ಆ ಸಮಿತಿಯ ಕಾರ್ಯಾಧ್ಯಕ್ಷನಾಗಿ ಕಾರ್ಯ ನಿರ್ವಹಿಸಬೇಕು.

## 87. ಸಾಗರ ಮೀನುಗಾರ (Sea fisherman)



1. ಮಾರುಕಟ್ಟೆಗಾಗಿ ಸಮುದ್ರದಲ್ಲಿ ಮೀನು ಹಿಡಿಯುವ ಬೇರೆ ಬೇರೆ ವಿಧಾನಗಳನ್ನು ತಿಳಿದಿರ –ಬೇಕು. ಟ್ರಾಲರ್‌ಗಳು, ಬಲೆಗಳು ಮತ್ತು ಎಳೆ –ಹಗ್ಗಗಳನ್ನು ಉಪಯೋಗಿಸುವ ವಿಧಾನಗಳನ್ನು ತಿಳಿದಿರಬೇಕು. ಮತ್ತು ಷೆಲ್ ಫಿಷ್ ಹಿಡಿಯಬೇಕು. ಇವುಗಳಲ್ಲಿ ಎರಡು ಅಂಶಗಳ ಬಗ್ಗೆ ಅನುಭಾವೀ ತಿಳುವಳಿಕೆ ಇರಬೇಕು.

2. ಟ್ರಾಲರ್‌ಗಳಿಗೆ ಉಪಯೋಗಿಸುವ ಸೀನ್ / ಟ್ರ್ಯಾಮೆಲ್ / ಟ್ರಾಲ್ ನೆಟ್ ಎಳೆಬಲೆಯ ರಚನೆ, ಅವುಗಳ ದುರಸ್ತಿ ಮತ್ತು ಯಪಯೋಗಿಸುವ ಬಗ್ಗೆ ವಿವರಸುವ ಸಾಮರ್ಥ್ಯವಿರಬೇಕು.

3. ಸಾಮಾನ್ಯ ರೀತಿಯ ಹೆಗ್ಗಾಳಿ ಮತ್ತು ಚಂಡಮಾರುತ ಹಾಗು ಪೇಚಾಟದ ಸಂಕೇತಗಳ ಬಗ್ಗೆ ತಿಳಿದಿರಬೇಕು.

4. ಸ್ಥಳೀಯವಾಗಿ ಒಡಿಯುವ ಮೀನುಗಳ ಸರಿಯಾದ ಹೆಸರುಗಳನ್ನು ತಿಳಿದಿರಬೇಕು..

**88. ಸ್ವರಕ್ಷಣೆ (Self defence)**

ಕರಾಟೆ ಅಥವಾ ಜೂಡೋ ಆರಿಸಿಕೊಳ್ಳಿ



**ಅ. ಕರಾಟೆ**

ಅರ್ಹ ನಿಪುಣರ ಮಾರ್ಗದರ್ಶನದಲ್ಲಿ, ಹಿಡಿಯುವ ದಾಳಿಗೆ ಪ್ರತಿಯಾದ ಕರಾಟೆ ರಕ್ಷಣೆಯವರೆಗೆ. ಕ್ರಮಬದ್ಧವಾದ ಅನುಕ್ರಮವಾದ ಕರಾಟೆ ತರಬೇತಿ ಪಡೆಯುವುದು ಅವಶ್ಯಕ.

ಈ ಕೆಳಕಂಡ ಗುಂಪುಗಳ ಪೈಕಿ ಯಾವುದಾದರೂ 2 ಗುಂಪುಗಳನ್ನು ಪರೀಕ್ಷಕರು ಒಪ್ಪುವ ರೀತಿಯಲ್ಲಿ ಪ್ರದರ್ಶಿಸಬೇಕು.

**ಗುಂಪು ಅ** – ಪ್ರಾರಂಭಿಕ ವ್ಯಾಯಾಮಗಳು, ಕರಾಟೆ ವರಸೆಗಳ, ಗುದ್ದುವ ಮತ್ತು ತದಕುವ ತಂತ್ರಗಳು, ಉಸಿರಾಟದ ತಂತ್ರಗಳು, ಯಾವುದಾದರೂ 4 ಕರಾಟೆಯ ವಿಧಗಳು, ಹಿಡಿಯುವ ದಾಳಿಗೆ ಪ್ರತಿದಾಳಿಯ ರಕ್ಷಣೆ.

**ಗುಂಪು ಆ** – ಪ್ರತಿದಾಳಿಯ ರಕ್ಷಣಾ ತಡೆ ತಂತ್ರಗಳು, ಉಸಿರಾಟದ ತಂತ್ರಗಳು ಯಾವುದಾದರೂ 5 ಕರಾಟೆ ವಿಧಗಳು ಹಿಡಿಯುವ ದಾಳಿಗೆ ಪ್ರತಿಯಾದ ರಕ್ಷಣೆ.

**ಗುಂಪು ಇ** – ಪ್ರಾರಂಭಿಕ ವ್ಯಾಯಾಮಗಳು ಕರಾಟೆ ವರಸೆಗಳು, ಒದೆಯುವ ತಂತ್ರಗಳು, ಉಸಿರಾಟದ ತಂತ್ರಗಳು, ಯಾವುದಾದರೂ 4 ಕರಾಟೆ ವಿಧಗಳು ಹಿಡಿಯುವ ದಾಳಿಗೆ ಪ್ರತಿಯಾದ ರಕ್ಷಣೆ.

**ಆ. ಜೂಡೋ**

ಅರ್ಹ ಶಿಕ್ಷಕರಿಂದ ಸೂಕ್ತ ಅವಧಿಯ ತರಬೇತಿ ಪಡೆಯಬೇಕು.

1. ಈ ಕೆಳಗಿನವುಗಳಲ್ಲಿ ಯಾವುದಾದರೂ ಎರಡನ್ನು ಪ್ರದರ್ಶಿಸಬೇಕು.
   - ಅ. ಪಕ್ಕಕ್ಕೆ ಬೀಳಿಸುವುದು ಹಾಗೂ ಹಿಂದಕ್ಕೆ ಮತ್ತು ಮುಂದಕ್ಕೆ ಉರುಳುವುದು.
   - ಆ. ಸಮತೋಲನ ತಪ್ಪಿಸುವುದು
   - ಇ. ಮೂಲಭೂತ ನಿಲುವುಗಳು, ಸುಗಿಯಾಷಿ (Tsugiashi) ಮತ್ತು ತೈಬಾಕಿ (taisbaki)

ಈ. ಪೃಷ್ಠ ಎಸೆತ (hip throw)

ಉ. ಓ–ಸೋಟೋ–ಗಾರಿ

ಊ. ಕೆಸಾಗಟಾಮೆ

ಈ ಕೆಳಗಿನವುಗಳನ್ನು ಒಳಗೊಂಡಂತೆ ಪ್ರಾಥಮಿಕ ಸ್ವರಕ್ಷಣೆಯ ಬಗ್ಗೆ ತಿಳಿದಿರಬೇಕು.

2. ಅ. ಶರೀರದ ಮೇಲೆ ದಾಳಿ ಮಾಡುವ ಕನಿಷ್ಠ 6 ಅಂಶಗಳು

ಆ. ಮುಂಭಾಗ, ಉರುಲುಗಳ ಮಣಿಕಟ್ಟು ಹಿಡಿತಗಳಿಂದ ಬಿಡಿಸಿ ಕೊಳ್ಳುವುದು.

**89. ಸಂಕೇತಗಾರ (Signaller)**



1. ಧ್ವಜಗಳನ್ನು ಬಳಸಿ, ಸೆಮಪ್ಫೋರ್ ವಿಧಾನದಲ್ಲಿ ನಿಮಿಷಕ್ಕೆ 7 ಪದಗಳನ್ನು (35 ಅಕ್ಷರಗಳನ್ನು) ಅಥವಾ ಮೋರ್ಸ್ ವಿಧಾನದಲ್ಲಿ ನಿಮಿಷಕ್ಕೆ 5 ಪದಗಳ (25 ಅಕ್ಷರಗಳ) ಸಂದೇಶವನ್ನು ಕಳುಹಿಸಬೇಕು ಮತ್ತು ಸ್ವೀಕರಿಸಬೇಕು.
2. ಬಜ್ಜರ್ ಅಥವಾ ಸೌಂಡರ್ ಬಳಸಿ ನಿಮಿಷಕ್ಕೆ 6 ಪದಗಳ (30 ಅಕ್ಷರಗಳ) ಸಂದೇಶವನ್ನು ಕಳುಹಿಸಬೇಕು ಮತ್ತು ಸ್ವೀಕರಿಸಬೇಕು.
3. ದೀಪ ಅಥವಾ ತಟ್ಟೆ (disc) ಬಳಸಿ ನಿಮಿಷಕ್ಕೆ 5 (25 ಅಕ್ಷರಗಳ) ಸಂದೇಶವನ್ನು ಕಳುಹಿಸಬೇಕು ಮತ್ತು ಸ್ವೀರಿಸಬೇಕು.

**ಸೂಚನೆ :** ಮೇಲಿನ ಎಲ್ಲಾ ಪರೀಕ್ಷೆಗಳಲ್ಲಿ ಶೇ. 90 ಅಂಕಗಳಿಸಬೇಕು.

4. ಸಂದೇಶವನ್ನು ಕಳುಹಿಸುವಾಗ ಮತ್ತು ಸ್ವೀಕರಿಸುವಾಗ, ಅಂಗೀಕೃತ ವಿಧಾನ ತಿಳಿದಿದೆ ಎಂಬುದನ್ನು ಸಾಬೀತು ಪಡಿಸಬೇಕು
5. "ಬಾಲಕರಿಗಾಗಿ ಸ್ಕೌಟಿಂಗ್"ನಲ್ಲಿ ಕೊಟ್ಟಿರುವ ವಿವಿಧ ಚಿಹ್ನೆಗಳು ಮತ್ತು ಸಂಕೇತಗಳನ್ನು ತಿಳಿದಿರಬೇಕು.
6. ಮೋರ್ಸ್ ಅಥವಾ ಸೇಮಪ್ಫೋರ್ ಕ್ರಮದಲ್ಲಿ ಕನಿಷ್ಠ 1/2 ಮೈಲಿ ದೂರಕ್ಕೆ ನಿಮಿಷಕ್ಕೆ 4 ಪದಗಳ (20 ಅಕ್ಷರಗಳ) ಸಂದೇಶವನ್ನು ಕಳುಹಿಸಲು ಕನಿಷ್ಠ ಪಕ್ಷ ಎರಡು ವಿಧಾನಗಳನ್ನು ಸುಧಾರಣೆ ಮಾಡಬೇಕು.

**ಸೂಚನೆ :** ಹೊರಾಂಗಣದಲ್ಲಿ ಸ್ವೀಕರಿಸುವ ಮತ್ತು ಕಳುಹಿಸುವ ನಿಲ್ದಾಣಗಳು ಕನಿಷ್ಠ 150 ಮೀ. ಅಂತರದಲ್ಲಿರಬೇಕು. ಬಜ್ಜರ್ ನಿಲ್ದಾಣಗಳು ಪ್ರತ್ಯೇಕ ಕೊಠಡಿಗಳಲ್ಲಿರಬೇಕು.

**90. ಮಣ್ಣು ಸಂರಕ್ಷಕ (Soil Conservator)**



1. ಭೂಮಿಯ ಮೇಲ್ಮೈಯಲ್ಲಿ ಉಂಟಾಗುವ ಬದಲಾವಣೆಗಳನ್ನು ತಿಳಿದಿರಬೇಕು. ಉದಾ: ಸವಕಳಿ, ಸ್ಥಳಾಂತರ, ಸಂಗ್ರಹಣೆ ಅದಕ್ಕೆ ಕಾರಣಗಳು ತಿಳಿದಿರಬೇಕು.
2. ಮಣ್ಣು ಸವಕಳಿಯ ಸಮಸ್ಯೆಗಳು, ಅದರಿಂದ ಉಂಟಾಗುವ ಅಪಾಯಗಳು; ವಿಧಗಳು ಕಾರಣಗಳು ಹಾಗೂ ಅವುಗಳನ್ನು ತಡೆಗಟ್ಟುವ ಕ್ರಮಗಳನ್ನು ತಿಳಿದಿರಬೇಕು.
3. ಮಣ್ಣು ಸವಕಳಿಯ ಸಮಸ್ಯೆಯನ್ನು ಅಧ್ಯಯನ ಮಾಡಬೇಕು. ಮಣ್ಣು ಸಂರಕ್ಷಣೆ, ಕಾಡು ಬೆಳೆಸುವಿಕೆ ಮತ್ತು ನೀರಿನ ಕೊರತೆ ನಿವಾರಣೆ ಇವುಗಳ ಬಗ್ಗೆ ದೇಶದಲ್ಲಿ ಕೈಗೊಂಡಿರುವ ವಿವಿಧ ಕಾರ್ಯಕ್ರಮಗಳ ಮಾಹಿತಿ ಒಳಗೊಂಡ ದಾಖಲೆ ಪುಸ್ತಕ ತಯಾರಿಸಬೇಕು. ಮಣ್ಣಿನ ಸವಕಳಿಯ ಬಗ್ಗೆ ಸ್ಥಳೀಯ ಸಮಸ್ಯೆಗಳ ಬಗ್ಗೆ ಸ್ವಂತ ಅನುಭವ ಮತ್ತು ವೀಕ್ಷಣೆಗಳಿಂದ ಒಂದು ದಾಖಲೆ ಪುಸ್ತಕ ತಯಾರಿಸಬೇಕು. 3 ತಿಂಗಳ ಕಾಲ ಈ ಅಧ್ಯಯನ ಮಾಡಿರಬೇಕು.
4. ಸಸಿ ನೆಡುವುದು ಅಥವಾ ಕಾಡು ಬೆಳೆಸುವುದು ಮುಂತಾದ ವಿಧಾನಗಳ ಮೂಲಕ ಮಣ್ಣಿನ ಸವಕಳಿ ತಡೆಯುವುದರ ಪ್ರಾಮುಖ್ಯತೆಯನ್ನು ತಿಳಿದಿರಬೇಕು. ಯಾವುದೇ ಒಂದು ಯೋಜನೆಯಲ್ಲಿ 40 ಗಂಟೆಗಳ ಕಾಲ ಸೇವೆಸಲ್ಲಿಸಿರಬೇಕು. ಆ ರೀತಿ ಸೇವೆ ಸಲ್ಲಿಸಿದ್ಧರ ದಾಖಲೆಯನ್ನು ನೀಡಬೇಕು.
5. ತನ್ನ ಪಟಾಲಂನ ಸಹಕಾರದೊಂದಿಗೆ ಕನಿಷ್ಠ 10 ಹಣ್ಣಿನ ಸಸಿಗಳನ್ನು ನೆಡಬೇಕು ಹಾಗೂ ಅವುಗಳನ್ನು 3 ತಿಂಗಳ ಕಾಲ ಆರೈಕೆ ಮಾಡಬೇಕು
6. ತನ್ನ ಸ್ಥಳೀಯ ಮಣ್ಣು ಸಂರಕ್ಷಕ ಮಂಡಳಿಯ ಸಂಘಟನೆ, ಕಾರ್ಯನಿರ್ವಹಣೆ ಮತ್ತು ಪ್ರಯೋಗಗಳ ಅರಿವಿರಬೇಕು.

**91. ಸೌರಶಕ್ತಿ ಜಾಗೃತಿ (Solar Energy awareness)**



1. ವಿವಿಧ ಪ್ರದೇಶಗಳಲ್ಲಿ ಹಾಗೂ ಕಾಲಗಳಲ್ಲಿ, ಸೂರ್ಯನಿಂದ ಎಷ್ಟು ಶಕ್ತಿ, ಹೇಗೆ ನಮ್ಮನ್ನು ತಲುಪುತ್ತದೆ ಎಂಬುದನ್ನು ಅರಿತಿರಬೇಕು. ಹಾಗೂ ಆ ಶಕ್ತಿ ಏನಾಗುತ್ತದೆ ಎಂಬುದನ್ನು ತಿಳಿದಿರಬೇಕು. ಸೂರ್ಯನ ಚಲನೆಯ ಬಗ್ಗೆ ತಿಳಿದಿರಬೇಕು. ಸೂರ್ಯನ ಸ್ಥಾನವನ್ನು ಗುರುತಿಸಲು/ವೀಕ್ಷಿಸಲು ಉಪಕರಣಗಳನ್ನು ಬಳಸಬೇಕು. ದಿಗಂತದಿಂದ ಮತ್ತು ನೈಜ ಉತ್ತರ ದಿಕ್ಕಿನಿಂದ ಸೂರ್ಯನ ಕೋನಾಂತರವನ್ನು ಅಳೆಯಬೇಕು. ಭಾರತೀಯ

ಗೃಹೋಪಯೋಗಿ ಪಂಚಾಂಗವನ್ನು ಉಪಯೋಗಿಸಲು ಬರಬೇಕು. ಸೌರಯಂತ್ರ(Sundial)ವನ್ನು ತಯಾರಿಸಿ ಬಳಸಬೇಕು.

2. ಶಾಖ ಮತ್ತು ವಿದ್ಯುತ್‌ನ್ನು ಪಡೆಯಲು ಸೌರಶಕ್ತಿಯ ಸಂಗ್ರಹಣೆ, ಸಂಗ್ರಹಣೆ ಸಂಚಯನ ಮತ್ತು ಉಪಯೋಗದ ವಿವಿಧ ವಿಧಾನಗಳನ್ನು ಅರಿತಿರಬೇಕು. ಸಮತಲ ಫಲಕ, ಕೇಂದ್ರೀಕರಿಸುವ ಸಂಗ್ರಾಹಕ, ಗಾಜಿನ ಹೊದಿಕೆ, ಪ್ರತಿಫಲಕಗಳು, ಫ್ರೆಸ್ನೆಲ್ ಮಸೂರ ಸೇರಿದಂತೆ ಮಸೂರಗಳು, ಇವುಗಳ ಉಪಯೋಗ ತಿಳಿದಿರಬೇಕು. ಕನಿಷ್ಠ ಎರಡು ಕಾರ್ಯಶೀಲ ಮಾದರಿಗಳನ್ನು ವೈಯಕ್ತಿಕ ಕುಟುಂಬದ ಉಪಯೋಗಕ್ಕಾಗಿ ತಯಾರಿಸಬೇಕು – ಸೌರ ಕುಕ್ಕರ್, ಒಣಗಿಸುವ ಸಾಧನ, ಭಟ್ಟಿ ಒಲೆ (stills) (ಭಟ್ಟಿ ಇಳಿಸಿದ ನೀರು ತಯಾರಿಸಲು), ನೀರು ತಾಪಕ (water heater) ದ್ಯುತಿ ವಿದ್ಯುತ್ ಕೋಶ (battery charger) ಲ್ಯಾಂಟ್ರನ್‌ಗಳು, ಪಂಪ್, ಟಿ.ವಿ. ವಿದ್ಯುತ್ ಕೋಶ

3. i. ಕನಿಷ್ಠ 3 ವಿವಿಧ ಬಗೆಯ ಸೌರಶಕ್ತಿಯ ಸ್ಥಾವರಗಳನ್ನು ನೋಡಿ ವಿವರಿಸಲು ಸಮರ್ಥನಿರಬೇಕು.

   ii. ಸೌರ ಕುಕ್ಕರ್ / ನೀರುತಾಪಕ ಇವುಗಳನ್ನು ಬಳಸುವ ವಿಧಾನಗಳು ಹೇಗೆ? ಏನು ಮಾಡಬಹುದು? ತಿಳಿದಿರಬೇಕು.

4. ಸೌರಶಕ್ತಿ ಬಳಕೆ ಅನುಕೂಲಗಳು / ಪ್ರತಿಕೂಲಗಳನ್ನು ತಿಳಿದಿರಬೇಕು. ಈ ಉಪಕರಣಗಳನ್ನು ತಯಾರಿಸುವ / ಪರೀಕ್ಷಿಸುವ / ಇದಕ್ಕೆ ಸಹಕರಿಸುವ ಸರ್ಕಾರಿ ಮತ್ತು ಇತರೆ ಸಂಘಸಂಸ್ಥೆಗಳ ಅರಿವು ಇರಬೇಕು.

## 92. ಮರಸು ಬೇಟೆಗಾರ (Stalker)

1. ಹಗಲಿನಲ್ಲಿ ಮತ್ತು ರಾತ್ರಿ ವೇಳೆಯಲ್ಲಿ ಮರಸಾಗಿ ಸಾಗುವ ಸಾಮರ್ಥ್ಯ ವಿರಬೇಕು. ಸಾಧ್ಯವಿರುವ ಎಲ್ಲಾ ಬಗೆಯ ಮರೆಗಳು, ಕಪಟರೂಪಗಳು, ಗಾಳಿ, ನೆರಳುಗಳು, ಹಿನ್ನೆಲೆ ಇವುಗಳನ್ನು ಬಳಸಿಕೊಳ್ಳುವ ಸಾಮರ್ಥ್ಯವಿರಬೇಕು.



2. ಕನಿಷ್ಠ 6 ಕಾಡು ಪಕ್ಷಿಗಳು ಅಥವಾ ಪ್ರಾಣಿಗಳನ್ನು ಅವುಗಳ ಸ್ವಾಭಾವಿಕ ಪರಿಸರದಲ್ಲಿ ಮರಸಾಗಿ ಅಭ್ಯಸಿಸಿದುದರ ಪುರಾವೆ ನೀಡಬೇಕು. ತಾನೇ ತೆಗೆದ ಛಾಯಾಚಿತ್ರಗಳನ್ನು ಅಥವಾ ತಾನೇ ರಚಿಸಿದ ರೇಖಾಚಿತ್ರಗಳನ್ನು ನೀಡಬೇಕು ಮತ್ತು ತನ್ನ ವೀಕ್ಷಣೆಯ ಫಲಿತಾಂಶಗಳನ್ನು ವಿವರಿಸಬೇಕು.

3. ಕನಿಷ್ಠ 3 ಪ್ರಾಣಿಗಳ ಜಾಡುಗಳ ಪ್ಲಾಸ್ಟಿಕ್ ಎರಕ ತಯಾರಿಸಬೇಕು. ಅವುಗಳಲ್ಲಿ ಒಂದು ಕಾಡು ಪ್ರಾಣಿಯದಾಗಿರಬೇಕು.

## 93. ನಕ್ಷತ್ರ ವೀಕ್ಷಕ (Star man)



1. ತಾನು ವಾಸಿಸುವ ಮನೆಯ ಕಿಟಕಿಯಿಂದ ಅಥವಾ ಸಮೀಪದ ತೋಟದಿಂದ ಅಥವ ಬೀದಿಯಿಂದ ಕಾಣಿಸುವ. ನಕ್ಷತ್ರಗಳು. ಚಂದ್ರ, ಗ್ರಹಗಳನ್ನು 3 ತಿಂಗಳ ಕಾಲ ಗಮನಿಸಿ, ವೀಕ್ಷಣೆಯ ವರದಿಯ ದಾಖಲೆ ಪುಸ್ತಕ ಇಡಬೇಕು.

**ಸೂಚನೆ:** ಕನಿಷ್ಠ ಪ್ರತಿವಾರಕ್ಕೊಮ್ಮೆ ಸಂಜೆಯ ವೇಳೆ ಒಂದೇ ಸಮಯಕ್ಕೆ ಮಾಡಿದ ವೀಕ್ಷಣೆಯ ದಾಖಲೆ ಇರಬೇಕು.

2. ಸೂರ್ಯ. ಚಂದ್ರ, ಭೂಮಿ ಮತ್ತು ಇತರ ಗ್ರಹಗಳ ಸಾಪೇಕ್ಷ ಸ್ಥಾನಗಳ, ಮತ್ತು ಗಾತ್ರಗಳ ವಿವರಗಳನ್ನು ರೇಖಾ ಚಿತ್ರಗಳ ಅಥವಾ ಮಾದರಿಗಳ (ಮಾದರಿಗಳು ಅಪೇಕ್ಷಣೀಯ) ಸಹಾಯದಿಂದ ಪ್ರದರ್ಶಿಸಬೆಕು. ಅವುಗಳ ಚಲನೆಗಳನ್ನು ತೋರಿಸಬೇಕು.
3. ಈ ಕೆಳಗಿನವುಗಳನ್ನು ಆಕಾಶದಲ್ಲಿ ತೋರಿಸಬೇಕು.
   i. ವರ್ಷಪೂರ್ತಿ ಕಾಣಬರುವ ಕನಿಷ್ಠ ನಾಲ್ಕು ನಕ್ಷತ್ರ ರಾಶಿಗಳು
   ii. ಮೊದಲ ಕಾಂತಿಮಾನದ ಕನಿಷ್ಠ ನಾಲ್ಕು ನಕ್ಷತ್ರಗಳು (ಅವುಗಳ ನಕ್ಷತ್ರರಾಶಿಗಳು. ವರ್ಷದಲ್ಲಿ ಅವು ಕಾಣಿಸುವ ಸಮಯ, ಅವಧಿ ತಿಳಿದಿರಬೇಕು.)
4. ನಕ್ಷತ್ರಗಳ ಸಹಾಯದಿಂದ ದಿಕ್ಕನ್ನು ತಿಳಿಯಬೇಕು

## 94. ಈಜುಗಾರ (Swimmer)



1. ಉಡುಗೆ ತೊಡುಗೆಯಲ್ಲಿ (ಕನಿಷ್ಠ ಷರ್ಟ್ ಮತ್ತು ಧೋತಿ / ಟ್ರೌಜರ್ಸ್ ಧರಿಸಿರಬೇಕು.) 45.78 ಮೀ. (50 ಗಜ) ಈಜಬೇಕು ಮತ್ತು ನೀರಿನಲ್ಲಿಯೇ ಬಟ್ಟೆಗಳನ್ನು ಕಳಚಬೇಕು (ಪಾದಗಳು ಕೆಳಕ್ಕೆ ತಾಗದಂತೆ).
2. ದೇಹದ ಮುಂಭಾಗದಲ್ಲಿ ಕೈಗಳನ್ನು ಇರಿಸಿಕೊಂಡು, ಎದೆಯ ಮೇಲೆ 91.4 ಮೀ. (103 ಗಜ) ಮತ್ತು ಬೆನ್ನಿನ ಮೇಲೆ 45.78 ಮೀ. (50 ಗಜ) ಈಜಬೇಕು.
3. ಕನಿಷ್ಠ 1.5 ಮೀ. (5 ಅಡಿ) ಎತ್ತರದಿಂದ ತಲೆಕೆಳಗಾಗಿ ಜಿಗಿಯಬೇಕು ಮತ್ತು ತಳದಿಂದ ಸಣ್ಣ ವಸ್ತುಗಳನ್ನು ಹೆಕ್ಕಿ ತರಬೇಕು.

4. ಈ ಕೆಳಗಿನ ಅಂಶಗಳನ್ನು ವಿವರಿಸಲು ಶಕ್ತನಾಗಿರಬೇಕು. ಸ್ನಾಯುಸೆಳೆತಗಳನ್ನು ತಡೆಯಲು ಮತ್ತು ಆ ಸೆಳೆತ ಬಂದಾಗ ಅನುಸರಿಸಬೇಕಾದ ಉಪಾಯಗಳು. ಈಜು, ಸ್ನಾನಾದಿಗಳಿಗೆ ಮತ್ತು ಅಪರಿಚಿತ ಜಿಗಿಯುವ ತಾಣಗಳನ್ನು ಅಪರಿಚಿತ ಸ್ಥಳಗಳಲ್ಲಿ ಆಯ್ಕೆ ಮಾಡಬೇಕಾದ ತೆಗೆದುಕೊಳ್ಳಬೇಕಾದ ಎಚ್ಚರಿಕೆಗಳು ಕ್ರಮಗಳು. ಹೆಚ್ಚು ಸಂಖ್ಯೆಗಳಲ್ಲಿ ಸ್ನಾನ ಮಾಡುವಾಗ ಅಥವ ಈಜುವಾಗ 'ಜೋಡಿ ಪದ್ಧತಿ' (Buddy system).

5. ಈಜಲು ಬಾರದ ವ್ಯಕ್ತಿಗೆ ಈಜುಗಾರಿಕೆಯ ಮೂಲಭೂತ ಸಿದ್ಧಾಂತಗಳ ಬಗ್ಗೆ ತಿಳಿಯಹೇಳಲು ಶಕ್ತನಾಗಿರುವೆನೆಂದು ಪರೀಕ್ಷಕರಿಗೆ ಮನವರಿಕೆ ಮಾಡಬೇಕು.

**95. ದರ್ಜಿ (Tailor)**



1. ತನ್ನ ಅಳತೆಗೆ ಸರಿಹೊಂದುವ, ಸ್ಕೌಟ್ ಅಂಗಿ ಮತ್ತು ನಿಕ್ಕರ್ ಅಥವಾ ಸಮಾನವಾದ ಉಡುಪುಗಳನ್ನು ಕತ್ತರಿಸಿ, ಕೈಯಿಂದ ಅಥವಾ ಯಂತ್ರದ ಸಹಾಯದಿಂದ ಹೊಲಿಯಬೇಕು.

2. ಮೇಲೆ ತಿಳಿಸಿದ ಉಡುಪುಗಳಲ್ಲಿ ಅಥವಾ ಸೂಕ್ತವಾದ ಯಾವುದೇ ಉಡುಪಿನಲ್ಲಿ ನಿಪುಣ ಕೆಲಸಗಾರನ ಕೌಶಲದಿಂದ ತೇಪೆ ಹಾಕಬೇಕು ಮತ್ತು ಒಂದು ಸಣ್ಣ ರಂಧ್ರಕ್ಕೆ ಎಳೆತುಂಬಬೇಕು (Darn)

**96. ತಂತಿಸಂದೇಶ ಕಳುಹಿಸುವ (Telegraphist)**



ಸರಳ ವಿದ್ಯುನ್ಮಂಡಲಗಳನ್ನು ತಿಳಿದಿರಬೇಕು. ನಿಮಿಷಕ್ಕೆ 30 ಅಕ್ಷರಗಳ ವೇಗದಲ್ಲಿ, ಮೋರ್ಸ್ ಯಂತ್ರದ ಸಹಾಯದಿಂದ, ಒಂದು ಸಂದೇಶವನ್ನು ಕಳುಹಿಸಲು ಮತ್ತು ಸ್ವೀಕರಿಸಲು ಶಕ್ತನಾಗಿರಬೇಕು. ತಂತಿರಹಿತಸ್ಥಾವರಗಳ ರಚನೆ ಮತ್ತು ಅವುಗಳ ಮೂಲಭೂತ ತತ್ತ್ವಗಳನ್ನು ವಿವರಿಸಬೇಕು.

**97. ಜಾಡುಗಾರ (Tracker)**

1. ಬರಿಗಾಲಿನ ಅಥವಾ ಷೂ ಧರಿಸಿದ, ಮಾನವನ 3 ಬಗೆಯ ಹೆಜ್ಜೆ ಗುರುತುಗಳಲ್ಲಿ ಕಾಣಬರುವ ಎರಡು ವಿವಿಧ ಲಕ್ಷಣಗಳನ್ನು ಗುರುತಿಸಿ, ವಿವರಿಸಬೇಕು. ಸರಳ ಮಾನವ ಜಾಡಿನ ಎರಡು ಬೇರೆ ಬೇರೆ ಲಕ್ಷಣಗಳನ್ನು ಗುರುತಿಸಿ ವಿವರಿಸಬೇಕು.

2. ಮರಳಿನಲ್ಲಿ, ಹಿಮದಲ್ಲಿ, ಅಥವಾ ಯಾವುದೇ ಸೂಕ್ತ ಸ್ವಾಭಾವಿಕ ವಸ್ತುವಿನಲ್ಲಿ, ಎರಡು ಜಾಡು ಕಥೆಗಳನ್ನು ಆದಷ್ಟು ನಿಖರವಾಗಿ ಬಿಡಿಸಬೇಕು.



3. ಪಕ್ಷಿಗಳ, ಪ್ರಾಣಿಗಳ, ಕಾರ್‌ನ ಅಥವಾ ಸೈಕೆಲ್‌ನ ಜಾಡುಗಳ ಆರು ಪ್ಲಾಸ್ಟಿಕ್ ಕೃತಿಗಳನ್ನು ತಯಾರಿಸಬೇಕು. ಎಲ್ಲಾ ಕೃತಿಗಳನ್ನೂ ಸಹಾಯವಿಲ್ಲದೆ ತೆಗೆದಿರಬೇಕು ಮತ್ತು ಸ್ಥಳ ಮತ್ತು ದಿನಾಂಕ ನಮೂದಿಸಿರಬೇಕು. ಅವುಗಳಲ್ಲಿ ಕನಿಷ್ಠ ಎರಡು, ಕಾಡಿನ ಪ್ರಾಣಿ ಅಥವಾ ಪಕ್ಷಿಗಳದ್ದಾಗಿರಬೇಕು.

4. ಸ್ವಾಭಾವಿಕ ವಸ್ತುಗಳಿಂದ ಮಾಡಿದ ಕನಿಷ್ಠ ನಾಲ್ಕು ಬೇರೆ ಬೇರೆ ಬಗೆಯ ಗುರುತುಗಳನ್ನು ಕನಿಷ್ಠ 1 ಕಿ.ಮೀ. ದೂರದವರೆಗೆ ಹಾಕಬೇಕು. ಕನಿಷ್ಠ 40 ಗುರುತುಗಳನ್ನು ಬಳಸಿರಬೇಕು. ಹಾಗೂ ಸ್ಕೌಟ್‌ಗೆ ಅಪರಿಚಿತವಾದ ಸ್ಥಳವಾಗಿರಬೇಕು. ಈ ಗುರುತುಗಳನ್ನು ಹಾಕಿ ರಸ್ತೆಯನ್ನು ದಾಟಬಹುದು, ಆದರೆ ರಸ್ತೆಯನ್ನನುರಿಸಿ ಗುರುತು ಹಾಕುವಂತಿಲ್ಲ. ದ್ವಿತೀಯ ಸೋಪಾನ್ ಪದಕ ಹಂತದ ಸ್ಕೌಟ್‌ನು ಈ ಪಥವನ್ನು ಅನುಸರಿಸುವಂತಿರಬೇಕು.

## 98. ವಿಶ್ವ ಸಂರಕ್ಷಣೆ (World Conservation)



1. ಜಲಚಕ್ರವನ್ನು ನಿರ್ದೇಶಿಸುವ ರೇಖಾಚಿತ್ರ ಬರೆದು ಕೆಳಗಿನ ಪದಗಳನ್ನು ವಿವರಿಸಬೇಕು.
   - i) ಅವಪಾತ (Precipitation)
   - ii) ಹರಿಯುವುದು (Run-off)
   - iii) ಅಂತರ್ಜಲ (Ground water)
   - iv) ಜಲ ಲೋವೆ (water table)
   - v) ಬಾಷ್ಪೀಕರಣ (Evaporation)
   - vi) ಜಲವಿಸರ್ಜನೆ (Transpiration)

2. ನೀರು, ಗಾಳಿ (ಶಬ್ದವೂ ಸೇರಿ) ಮಣ್ಣು, ತ್ಯಾಜ್ಯ ವಸ್ತು ಇವುಗಳ ಮಾಲಿನ್ಯದ ಕಾರಣಗಳು ಹಾಗೂ ಅವುಗಳ ನಿಯಂತ್ರಣದ ಬಗ್ಗೆ ಪರಿಚಯವಿರಬೇಕು.

3. ಅನೇಕ ಬಗೆಯ ಪ್ರಾಣಿಸಂಕುಲಗಳು ವಿನಾಶದೆಡೆಗೆ ಸಾಗುತ್ತಿರುವುದು ಮತ್ತು ಅವುಗಳು ಉಳಿದುಕೊಳ್ಳಲು ಮಾಡಬಹುದಾದ ಸಹಾಯದ ಪರಿಚಯವಿರಬೇಕು.,

4. ಹೊರಸಂಚಾರ ಮತ್ತು ಶಿಬಿರ ವಾಸಗಳಲ್ಲಿ ಪ್ರಕೃತಿಯನ್ನು ಹಾಳು ಮಾಡದೆ, ಉತ್ತಮಪಡಿಸಲು "ಮಾಡಬೇಕಾದ ಮತ್ತು ಮಾಡಬಾರದ" ವಿಷಯಗಳ

ಪಟ್ಟಿಯನ್ನು ತಯಾರಿಸಬೇಕು.

5. ಅಳಿವಿನ ಅಪಾಯದಲ್ಲಿರುವ ಸಸ್ಯಗಳು ಮತ್ತು ಪ್ರಾಣಿಗಳ (ಸಾಧ್ಯವಿದ್ದರೆ ಚಿತ್ರ ಸಮೇತ) ಪಟ್ಟಿ ತಯಾರಿಸಬೇಕು.

6. ಕೆಳಗಿನ ಯಾವುದಾದರೂ ಎರಡು ಪ್ರಯೋಗಗಳನ್ನು ಮಾಡಬೇಕು.

   i. ಸವಕಳಿಯಿಂದ ಮಣ್ಣು ಹೇಗೆ ನಾಶವಾಗುತ್ತದೆ ಹುಲ್ಲು ಮತ್ತು ಇತರ ಸಸ್ಯಗಳನ್ನು ಬೆಳೆಯುವುದರಿಂದ ಅದನ್ನು ಹೇಗೆ ರಕ್ಷಿಸ ಬಹುದು ಎಂಬುದನ್ನು ಪ್ರದರ್ಶಿಸಬೇಕು.

   ii. ಮಣ್ಣು ಹೇಗೆ ಉಂಟಾಗುತ್ತದೆ ಎಂಬುದನ್ನು ಪ್ರದರ್ಶಿಸಬೇಕು

   iii. ಸಸ್ಯಗಳು ಆಮ್ಲಜನಕವನ್ನು ಹೇಗೆ ಉತ್ಪಾದಿಸುತ್ತವೆ ಎಂಬುದನ್ನು ಪ್ರದರ್ಶಿಸಬೇಕು.

   iv. ಎರಡು ಹುರುಳಿ ಬೀಜಗಳನ್ನು ಮೇಲ್ಮಣ್ಣು ಹಾಕಿರುವ ಕುಂಡದಲ್ಲಿ ಹಾಗೂ ಎರಡು ಹುರುಳಿ ಬೀಜಗಳನ್ನು ಕೆಳಮಣ್ಣು ಹಾಕಿರುವ ಕುಂಡದಲ್ಲಿ ಬಿತ್ತಬೇಕು. ಒಂದು ತಿಂಗಳ ಕಾಲ ಪರೀಕ್ಷಿಸಬೇಕು. (ಅ) ಎರಡು ಕುಂಡಗಳಲ್ಲಿನ ಸಸಿಗಳ ಬೆಳವಣಿಗೆಯಲ್ಲಿ ಕಂಡುಬರುವ ವ್ಯತ್ಯಾಸಗಳು (ಆ) ಸಸಿಗಳ ತೋರಿಕೆ ಮತ್ತು ಇತರ ವ್ಯತ್ಯಾಸಗಳು ಇವುಗಳನ್ನು ಗಮನಿಸಿ ವರದಿ ಮಾಡುವುದು.

   v. ಸೂಕ್ತವಾದ ಹೊಳೆಯಿಂದ ಮಣ್ಣು ಮಿಶ್ರಿತ ಬಗ್ಗಡದ ನೀರನ್ನು ಗಾಜಿನ ಜಾಡಿಯಲ್ಲಿ ಸಂಗ್ರಹಿಸಿ ಕನಿಷ್ಠ ಆರು ಗಂಟೆಗಳ ಕಾಲ ಇಡಬೇಕು. ತಳದಲ್ಲಿ ಸಂಗ್ರಹವಾದ ಮಣ್ಣನ್ನು ಗಮನಿಸಬೇಕು. ಮಣ್ಣು ಹೇಗೆ ಉಂಟಾಯಿತು? ಮತ್ತು ಏಕೆ ಹಾಗಾಯಿತು? ಎಂಬುದನ್ನು ವಿವರಿಸಬೇಕು.

   vi. ನೆರೆಹೊರೆಯ ಹವಾಮಾನದ ಮಳೆ, ಗಾಳಿಯ ದಿಕ್ಕು ಮತ್ತು ತೇವಾಂಶ ಸೇರಿದಂತೆ ಒಂದು ತಿಂಗಳ ಕಾಲ ದಾಖಲಾತಿ ಇಡಬೇಕು.

7. ಈ ಕೆಳಗಿನವುಗಳಲ್ಲಿ ಒಂದನ್ನು ಮಾಡಬೇಕು.

   i. ತನ್ನ ಪಟಾಲಂ ಅಥವಾ ದಳದೊಡನೆ ಸೇರಿ, ಸಾರ್ವಜನಿಕ ಉದ್ಯಾನವನ, ಅಥವಾ ತೋಟ, ಅಥವಾ ಶಾಲಾ ಆವರಣ ಅಥವಾ ಇನ್ನಾವುದೇ ಸಾರ್ವಜನಿಕ ಸ್ಥಳದಲ್ಲಿ 6 ಗಂಟೆಗಳ ಕಾಲ (ಪ್ರತಿಬಾರಿ 1 ಗಂಟೆಯಂತೆ) ಕಸಕಡ್ಡಿ ಹಾಕಿ ಗಲೀಜು ಮಾಡುವುದನ್ನು ವಿರೋಧಿಸಿ ಪ್ರಚಾರ (anti-litter campaign) ಕೈಗೊಳ್ಳಬೇಕು.

   ii. ತನ್ನ ಪಟಾಲಂ ಅಥವಾ ದಳದೊಡನೆ ಪ್ರಕೃತಿ ಸಂಚಾರ ಕೈಗೊಳ್ಳಬೇಕು.

iii. ಕನಿಷ್ಠ ಒಂದು ದಿನದ ಮಟ್ಟಿಗೆ ಸಂರಕ್ಷಣಾ ಯೋಜನೆಯಲ್ಲಿ ಪಾಲ್ಗೊಳ್ಳಬೇಕು.

iv. ಪ್ರಾಣಿಗಳಿಗೆ ಮೇವು ಪೆಟ್ಟಿಗೆಯನ್ನು ತಯಾರಿಸಿ, ವ್ಯವಸ್ಥೆಗೊಳಿಸಿ ನಿರ್ವಹಿಸಬೇಕು.

v. ಮಣ್ಣಿಗೆ ಸಂಬಂಧಿಸಿದ ಸಂಗ್ರಹಾಲಯ ವ್ಯವಸ್ಥೆಗೊಳಿಸಿ ನಿರ್ವಹಿಸಬೇಕು.

vi. ಕನಿಷ್ಠ 6 ಪಕ್ಷಿಗಳ ಅಥವಾ ಪ್ರಾಣಿಗಳ ಹೆಜ್ಜೆ ಗುರುತುಗಳ ಪ್ಲಾಸ್ಟರ್ ಕೃತಿಗಳನ್ನು ತಯಾರಿಸಬೇಕು.

**ಸೂಚನೆ:** 1. ರಾಜ್ಯ ಮುಖ್ಯ ಆಯುಕ್ತರು ಸಹಿ ಮಾಡಿದ ವಿಶೇಷ ಪ್ರಮಾಣ ಪತ್ರವನ್ನು ಈ ಪದಕದ ಜೊತೆ ನೀಡಲಾಗುತ್ತದೆ.

2. ಈ ಪದಕವನ್ನು ಎಡತೋಳಿನ ಮೇಲೆ, ರಾಜ್ಯಪುರಸ್ಕಾರ್ / ರಾಷ್ಟ್ರಪತಿ ಸ್ಕೌಟ್ ಪದಕದ ಕೆಳಗೆ ಧರಿಸಬೇಕು.

**99. ವಿಶ್ವಮೈತ್ರಿ (World Friendship)**



1. ತನ್ನ ದೇಶವನ್ನು ಹೊರತು ಪಡಿಸಿ ಕನಿಷ್ಠ ಎರಡು ದೇಶಗಳ, ಭೂಗೋಳ ಚರಿತ್ರೆ, ಇವುಗಳ ಪ್ರಾಥಮಿಕ ಅರಿವು ಇರಬೇಕು.

2. ಬೇರೆ ದೇಶದ ಸ್ಕೌಟ್‌ನೊಂದಿಗೆ ವೈಯಕ್ತಿಕವಾಗಿ ಅಥವಾ ಪಟಾಲಂ/ದಳದೊಡನೆ "ಕೂಡಿಕೆ ಕಾರ್ಯಕ್ರಮ"ದಡಿ (Link up) ಕನಿಷ್ಠ ಒಂದು ವರ್ಷದ ವರೆಗೆ (ಕನಿಷ್ಠ 6 ಪತ್ರಗಳು) ಪತ್ರ ವ್ಯವಹಾರ ನಡೆಸಿರಬೇಕು.

3. ವಿಶ್ವ ಸ್ಕೌಟ್ ಚಳವಳಿಯ (WOSM) ಸಂಘಟನೆ ಮತ್ತು ಚಟುವಟಿಕೆಗಳ ಅರಿವು ಇರಬೇಕು.

4. ಈ ಕೆಳಗಿನ ಯಾವುದಾದರೂ ಕನಿಷ್ಠ ಎರಡನ್ನು ಮಾಡಬೇಕು.

   i. ಬೇರೆ ದೇಶದ ಸ್ಕೌಟ್ ಚಟುವಟಿಕೆಗಳು, ಆಟಗಳು, ಸಂಸ್ಕೃತಿ, ಗೃಹಜೀವನ ಮತ್ತು ರಾಷ್ಟ್ರೀಯ ವಿದ್ಯಾಮಾನಗಳ ಬಗ್ಗೆ ಕನಿಷ್ಠ ಒಂದು ವರ್ಷಕಾಲದ ನಿದರ್ಶನಯುಕ್ತ ಮಾಹಿತಿಯನ್ನು ಒಳಗೊಂಡ ಆಲ್ಬಂ ಅಥವಾ ಚಿತ್ರ ಸಂಗ್ರಹವನ್ನು ಮಾಡಬೇಕು.

   ii. ವಿಶ್ವಸಂಸ್ಥೆಯ ಉದ್ದೇಶ ಮತ್ತು ಸಂಘಟನೆ, ಅದರ ಪ್ರಮುಖ ಅಂಗ ಸಂಸ್ಥೆಗಳ ಕಾರ್ಯ ತಿಳಿದಿರಬೇಕು, ಹಾಗೂ ಅದನ್ನು ಸರಳ ರೀತಿಯಲ್ಲಿ ವಿವರಿಸಬೇಕು.

iii. ಪರಿಹಾರ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣೆ, ಹೊಸವಲಸಿಗಳ ಸ್ವಾಗತ, ಪುನರ್ವಸತಿ ಮುಂತಾದ ಅಂತಾರಾಷ್ಟ್ರೀಯ ವೈಶಿಷ್ಟ್ಯದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರಬೇಕು. ಅಥವಾ ಯಾವುದೇ ಪಂಗಡಕ್ಕೆ ಸೇರದ ಸಂಘಟನೆಯು ಕೈಗೊಳ್ಳುವ ವಿಶ್ವ ಸೋದರತೆ ಪ್ರವರ್ತನೆಯ ಯೋಜನೆಯಲ್ಲಿ ಸಹಕರಿಸಬೇಕು.

iv. ಬೇರೆ ದೇಶದ ಸ್ಕೌಟ್ ಅಥವಾ ಸ್ಕೌಟ್‌ಗಳೊಡನೆ ಕನಿಷ್ಠ 7 ದಿವಸಗಳ ಕಾಲ, (ತನ್ನ ದೇಶದಲ್ಲಿಯಾಗಲಿ ಅಥವಾ ಬೇರೆ ದೇಶದಲ್ಲಿಯಾಗಲಿ) ಶಿಬಿರ ಹೂಡಿರಬೇಕು. ಅಥವಾ ಹೊರಸಂಚಾರ ಕೈಗೊಂಡಿರಬೇಕು ತನ್ನ ಅನಿಸಿಕೆಗಳನ್ನು ಹಾಗೂ ತಾನು ಪಡೆದ ತಿಳುವಳಿಕೆಯ ವಿವರಗಳನ್ನು ಒಳಗೊಂಡ ದಾಖಲೆ ಪುಸ್ತಕ ತಯಾರಿಸಬೇಕು.

## 100. ಯೋಗ (Yoga)



1. ಈ ಕೆಳಗಿನ ಅಂಶಗಳು ತಿಳಿದಿರಬೇಕು.
   - ಯೋಗ ಎಂದರೇನು? ವಿವರಣೆ
   - ಯೋಗದ ವಿವಿಧ ರೂಪಗಳು – ಜ್ಞಾನಯೋಗ; ಕರ್ಮಯೋಗ; ಅಷ್ಟಾಂಗಯೋಗ; ಭಕ್ತಿಯೋಗ
2. ಅಷ್ಟಾಂಗ (ಹಠ) ಯೋಗ ಎಂದರೇನು? ಅದರಲ್ಲಿ ಹೇಳುವ ಎಂಟು ಭಾಗಗಳಾವುವು? ಆ ಪ್ರತಿಯೊಂದನ್ನು ಸಂಕ್ಷಿಪ್ತವಾಗಿ ವಿವರಿಸಿ.
3. ಯೋಗ ಸಾಧನೆಯ ವೇಳೆ ಅನುಸರಿಸಬೇಕಾದ ಮತ್ತು ಅನುಸರಿಸಬಾರದ ಅಂಶಗಳು.
4. ಒಂದು ತಿಂಗಳ ಕಾಲ "ಸೂರ್ಯ ನಮಸ್ಕಾರ"ವನ್ನು ಅಭ್ಯಾಸ ಮಾಡಬೇಕು.
5. ಈ ಕೆಳಗಿನ ಆಸನಗಳನ್ನು ಒಂದು ತಿಂಗಳ ಕಾಲ ಅಭ್ಯಾಸ ಮಾಡಬೇಕು. ಅವುಗಳ ದೇಹದ ಮೇಲೆ ಉಂಟು ಮಾಡುವ ಪರಿಣಾಮಗಳನ್ನು ತಿಳಿಸಬೇಕು.

   ಪದ್ಮಾಸನ; ವಜ್ರಾಸನ; ಯೋಗಮುದ್ರ; ಉಷ್ಟ್ರಾಸನ; ತಾಡಾಸನ; ಅರ್ಧಕಟಿ ಚಕ್ರಾಸನ; ಭುಜಂಗಾಸನ; ನೌಕಾಸನ; ವಕ್ರಾಸನ; ಪವನ ಮುಕ್ತಾಸನ; ಸರ್ವಾಂಗಾಸನ; ಶವಾಸನ.
6. ಕನಿಷ್ಠ ಒಂದು ತಿಂಗಳ ಕಾಲ ಪ್ರಾಣಾಯಾಮ ಅಭ್ಯಾಸ ಮಾಡಬೇಕು. – ಅನುಲೋಮ; ವಿಲೋಮ; ಕಪಾಲಭಾತಿ; ಮತ್ತು ಭ್ರಾಮರಿ
7. ಒಂದು ನಿಮಿಷಕಾಲ "ತ್ರಾತಕ" ಮಾಡಲು ಬರಬೇಕು.

## ಅನುಬಂಧ 2

# ಸ್ಕೌಟ್ ಪದಕಗಳು ಮತ್ತು ಅವುಗಳ ಧಾರಣೆ

### ಎಡ ಜೇಬು



ಷರಾ : ಮರಿಗಳು, ಸ್ಕೌಟ್, ರೋವರ್ ವಿಭಾಗಕ್ಕನುಗುಣವಾಗಿ ಸದಸ್ಯತ್ವ ಪದಕವು ನೀಲಿ, ಹಸಿರು ಮತ್ತು ಕೆಂಪುಬಣ್ಣದಲ್ಲಿರುತ್ತದೆ.

# ಪದವಿ ಪಟ್ಟಿಗಳು

## ಎಡ ಜೇಬು

ದಳ ನಾಯಕ



ಸಹಾಯಕ ದಳ ನಾಯಕ



ಸೂಚನೆ : ದಳ ನಾಯಕ ಮತ್ತು ಸಹಾಯಕ ದಳ ನಾಯಕ ಪದವಿಗಳ ಪದಕಗಳು ಬೇರೆ ಬೇರೆ ಬಣ್ಣದಲ್ಲಿದ್ದು ರಾಷ್ಟ್ರೀಯ ಕಛೇರಿಯ ಸರಂಜಾಮು ವಿಭಾಗದಲ್ಲಿ ಮಾರಾಟಕ್ಕಿದೆ.

## ಎಡಜೇಬು



ಪಟಾಲಂ ನಾಯಕ



ದ್ವಿತೀಯಕ

# ಪ್ರವೀಣತಾ ಪದಕಗಳು

## ಬಲತೋಳು



# ಪ್ರವೀಣತಾ ಪದಕಗಳು

## ಎಡತೋಳು




ರಾ. ಪ್ರ. = ರಾಷ್ಟ್ರಪತಿ ಪ್ರಶಸ್ತಿ ಪದಕ

ರಾ. ಪು. = ರಾಜ್ಯ ಪುರಸ್ಕಾರ್ ಪದಕ

ರಾ. ಪು. ಪ. = ರಾಜ್ಯಪುರಸ್ಕಾರ್ ಹಾಗೂ
ರಾಷ್ಟ್ರಪತಿ ಪ್ರಶಸ್ತಿ ಪದಕಗಳ ಸಂಬಂಧ
ಪ್ರವೀಣತಾ ಪದಕಗಳು

# ವಿಶೇಷ ಶಾಖೆಗಳು

## ಅ) ವಿಸ್ತೃತ ಸ್ಕೌಟಿಂಗ್

1) ಕುರುಡುತನ, ಅಂಗವೈಕಲ್ಯ ಅಥವಾ ಮಾನಸಿಕ ದೌರ್ಬಲ್ಯ, ಮುಂತಾದ ದೈಹಿಕ ಅಥವಾ ಮಾನಸಿಕ ವಿಕಲತೆಯುಳ್ಳವನು ವಿಸ್ತೃತ ಸ್ಕೌಟ್ ಆಗಿರುತ್ತಾನೆ.

2) ವೈಕಲ್ಯವುಳ್ಳ ಒಬ್ಬ ವ್ಯಕ್ತಿಯು ಸ್ಕೌಟ್ ಆಗಲು ಅರ್ಹನಾಗಿರುತ್ತಾನೆ. ಒಬ್ಬ ಸ್ಕೌಟಿಗೆ ಅನ್ವಯವಾಗುವ, ಅವಶ್ಯಕ ವಿದ್ದರೆ,ಬದಲಾಯಿಸಿದ, ನಿಯಮ ಮತ್ತು ಆಗಾಗ್ಗೆ ಅನುಬಂಧದಲ್ಲಿ ತಿಳಿಸಿರುವ ವಿಶೇಷ ನಿಯಮಗಳು ವಿಸ್ತೃತ ಸ್ಕೌಟಿಗೆ ಅನ್ವಯವಾಗತಕ್ಕದ್ದು.

3) ವಿಸ್ತೃತ ಸ್ಕೌಟ್‌ಗಳ ಗುಂಪನ್ನು ಆಸ್ಪತ್ರೆ / ಸಂಸ್ಥೆ / ಕಾಲೋನಿ ಅಥವಾ ಶಾಲೆಯಲ್ಲಿ ತೆರೆಯಬಹುದು. ಒಬ್ಬ ವಿಸ್ತೃತ ಸ್ಕೌಟನು ಸಾಮಾನ್ಯ ಸ್ಕೌಟ್ ಗುಂಪಿನ ಸದಸ್ಯನೂ ಆಗಬಹುದು. ವಿಸ್ತೃತ ಸ್ಕೌಟ್ ಗುಂಪು ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯ (ಯಾವುದೇ ಸೂಕ್ತವೋ) ಅಧೀನದಲ್ಲಿ ಕಾರ್ಯನಿರ್ವಹಿಸತಕ್ಕದ್ದು.

4) ತನ್ನ ವೈಕಲ್ಯದ ಕಾರಣಕ್ಕಾಗಿ ವಿನಾಯಿತಿಗೊಳಿಸಿದ ಪರೀಕ್ಷೆಗಳನ್ನು ಹೊರತುಪಡಿಸಿ, ಉಳಿದಂತೆ ಸ್ಕೌಟ್‌ನಿಗೆ ನಿಗಧಿಪಡಿಸಿದ ಎಲ್ಲಾ ಪರೀಕ್ಷೆಗಳಲ್ಲಿ ಉತ್ತೀರ್ಣನಾಗತಕ್ಕದ್ದು. ಅಂತಹ ಸಂದರ್ಭದಲ್ಲಿ ವಿಸ್ತೃತ ಸ್ಕೌಟಿಗೆ ನಿಗಧಿಪಡಿಸಿದ ಪರ್ಯಾಯ ಪರೀಕ್ಷೆ ಅಥವಾ ಪರೀಕ್ಷೆಗಳಲ್ಲಿ ಅವನು ಉತ್ತೀರ್ಣನಾಗತಕ್ಕದ್ದು.

**(ವಿವರಣೆ : "ಸ್ಕೌಟ್" ಪದವು "ಕಬ್" ಹಾಗೂ "ರೋವರ್" ಒಳಗೊಂಡಿರತಕ್ಕದ್ದು.)**

## ಆ) ಸಾಗರ ಸ್ಕೌಟಿಂಗ್ ಶಾಖೆ :

ಸಾಗರ ಸ್ಕೌಟ್ ಮತ್ತು ಸಾಗರ ರೋವರ್

1) ಸಾಗರ ಸ್ಕೌಟ್‌ಗಳು ಸಾಗರ ಸ್ಕೌಟ್ ತಂಡ ರಚಿಸತಕ್ಕದ್ದು. ಸಾಗರ ರೋವರ್‌ಗಳು ಸಾಗರ ರೋವರ್ ಕ್ರ್ಯೂ ರಚಿಸತಕ್ಕದ್ದು.

2) ಸಾಗರ ಸ್ಕೌಟ್‌ಗಳು ಮತ್ತು ಸಾಗರ ರೋವರ್‌ಗಳಿಗೆ ಪ್ರತ್ಯೇಕ ಗುಂಪುಗಳು ಇರತಕ್ಕದ್ದು.

3) ಸಾಮಾನ್ಯವಾಗಿ ಸಾಗರ ಸ್ಕೌಟ್ ತಂಡ ಮತ್ತು ಸಾಗರ ರೋವರ್ ಕ್ರ್ಯೂಗಳು ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯ (ಯಾವುದು ಸೂಕ್ತವೋ ಅದು) ಭಾಗವಾಗಿರತಕ್ಕದ್ದು.

ಆದಾಗ್ಯೂ ಸಹ, ಜಲಕೌಶಲ್ಯದಲ್ಲಿ ವಿಶೇಷ ಭೋಧನೆಗಳನ್ನು ನೀಡುವ ಸಲುವಾಗಿ, ರಾಜ್ಯ ಮುಖ್ಯ ಆಯುಕ್ತರ ಅನುಮೋದನೆಯಂತೆ, ಸಾಗರ

ಸ್ಕೌಟ್, ತಂಡಗಳು ಮತ್ತು ಸಾಗರ ರೋವರ್ ಕ್ರ್ಯೂಗಳಿಗಾಗಿ ಪ್ರತ್ಯೇಕ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆ ರಚಿಸಬಹುದಾಗಿದೆ.

4) ಸಾಗರ ಸ್ಕೌಟ್ ತಂಡ ಅಥವಾ ಸಾಗರ ರೋವರ್ ಕ್ರ್ಯೂ ಅಥವಾ ಸ್ಥಳೀಯ ಸಂಸ್ಥೆ ಅಥವಾ ಜಿಲ್ಲಾ ಸಂಸ್ಥೆ (ಯಾವುದು ಸೂಕ್ತವೋ ಅದು) ಈ ಕೆಳಗಿನ ಅಂಶಗಳಿಗೆ ಸಂಬಂಧಪಟ್ಟಂತೆ ನಿಯಮಗಳನ್ನು ಸೂಕ್ತವಾದ ರೀತಿಯ ಮುಖಾಂತರ. ರಾಜ್ಯ ಸಂಸ್ಥೆಗೆ ಕಳುಹಿಸತಕ್ಕದ್ದು.

ಅ) ಸಾಗರ ಸ್ಕೌಟ್‌ಗಳು ಮತ್ತು ಸಾಗರ ರೋವರ್‌ಗಳು ಬಳಸುವ ದೋಣಿಯ ಅಥವಾ ದೋಣಿಗಳ ತಪಾಸಣೆ

ಆ) ಆ ಪ್ರದೇಶದ ನಿರ್ಭಂಧನೆಗಳು ಮತ್ತು ಅಂತಹ ದೋಣಿ ಒಯ್ಯಬಹುದಾದ ವ್ಯಕ್ತಿಗಳ ಸಂಖ್ಯೆ

ಇ) ವಾಯುತೊಟ್ಟಿಗಳು, ಜೀವರಕ್ಷಕ ಸೊಂಟ ಪಟ್ಟಿಗಳು ಮತ್ತು ಇತರೆ ರಕ್ಷಣಾ ಸಾಧನಗಳ ಇರುವಿಕೆ

ಈ) ಅಂತಹ ದೋಣಿಗಳ ಸುಪರ್ದಿಗೆ ನೇಮಿಸಲ್ಪಟ್ಟ ಅರ್ಹ ವ್ಯಕ್ತಿ

ಉ) ದೋಣಿಗಳ ಕಾಳಜಿ ಮತ್ತು ನಿರ್ವಹಣೆ.

5) ಜಲ ವಾಹನದಲ್ಲಿರುವ ಭೋಧಕನು, ಆ ಉದ್ದೇಶಕ್ಕಾಗಿ ಅರ್ಹತೆಹೊಂದಿದವನಾಗಿರತಕ್ಕದ್ದು.

6) ದೋಣಿಯ, ಸಾಗರ ಯೋಗ್ಯತೆಯ ಬಗ್ಗೆ ಇತ್ತೀಚೆಗಿನ ಅಧಿಕೃತ ಪ್ರಮಾಣ ಪತ್ರ ಅವಶ್ಯಕ

7) "ಅಧಿಕಾರ ಪ್ರಮಾಣ ಪತ್ರ"ವೂಸಹ ಅವಶ್ಯಕ

**ಇ) ವಾಯು ಸ್ಕೌಟಿಂಗ್ ಶಾಖೆ**

ವಾಯು ಸ್ಕೌಟ್, ವಾಯು ರೋವರ್

1) ವಾಯು ಸ್ಕೌಟ್ ಅಥವಾ ವಾಯು ರೋವರ್, ವಾಯು ಚಟುವಟಿಕೆಗಳಲ್ಲಿ ಭೋಧಿಸಲ್ಪಡಬೇಕು. ವಾಯು ಸ್ಕೌಟ್ ಮತ್ತು ವಾಯು ರೋವರ್‌ಗಳು ಪ್ರತ್ಯೇಕ ವಾಯು ಸ್ಕೌಟ್ ತಂಡ ಮತ್ತು ವಾಯು ರೋವರ್ ಕ್ರ್ಯೂ ರಚಿಸತಕ್ಕದ್ದು.

2) ಸಾಮಾನ್ಯವಾಗಿ, ವಾಯು ಸ್ಕೌಟ್ ತಂಡ ಮತ್ತು ವಾಯು ರೋವರ್ ಕ್ರ್ಯೂ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯ (ಯಾವುದು ಸೂಕ್ತವೋ ಅದು) ಅಧೀನದಲ್ಲಿ ಕಾರ್ಯನಿರ್ವಹಿಸತಕ್ಕದ್ದು.

ಆದಾಗ್ಯೂ ಸಹ, ವಾಯು ಚಟುವಟಿಕೆಗಳಲ್ಲಿ ವಿಶೇಷ ಬೋಧನೆಗಳನ್ನು ನೀಡುವ ಸಲುವಾಗಿ, ರಾಜ್ಯ ಮುಖ್ಯ ಆಯುಕ್ತರ ಅನುಮೋದನೆ ಮೇರೆಗೆ,

ವಾಯು ಸ್ಕೌಟ್ ತಂಡಗಳಿಗಾಗಿ ಮತ್ತು ವಾಯು ರೋವರ್ ಕ್ರ್ಯೂಗಳಿಗಾಗಿ ಪ್ರತ್ಯೇಕ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆ ರಚಿಸಬಹುದಾಗಿದೆ. ಈ ನಿಟ್ಟಿನಲ್ಲಿ ಮುಖ್ಯ ರಾಷ್ಟ್ರೀಯ ಆಯುಕ್ತರು ನೀಡಿದ ವಿಶೇಷ ನಿಬಂಧನೆಗಳನ್ನು ವಾಯುಸ್ಕೌಟ್ ತಂಡ ಮತ್ತು ವಾಯು ರೋವರ್ ಕ್ರ್ಯೂ ಪಾಲಿಸತಕ್ಕದ್ದು.

**ಈ) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಾಹಸ ಕ್ಲಬ್:**

**ಪೀಠಿಕೆ :** ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿರುವ ಹೆಚ್ಚಿನ ಸಂಖ್ಯೆಯ ಯುವಕರು, ಯುವಸಂಘಟನೆಗಳು ಏರ್ಪಡಿಸುವ ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸಲು ಆಸಕ್ತಿಯುಳ್ಳವರಾಗಿರುತ್ತಾರೆ. ಸಾಹಸ ಚಟುವಟಿಕೆಗಳನ್ನು ಪ್ರವರ್ತಗೊಳಿಸಲು ತಳಮಟ್ಟದಲ್ಲಿ ಆ ರೀತಿಯ ಯುವ ಸಂಘಟನೆ ಇಲ್ಲ.

ಈ ಅಂತರವನ್ನು ತುಂಬಲು ಹಾಗೂ ಗರಿಷ್ಟ ವಯೋಮಿತಿಯನ್ನು ತಲುಪಿದ ನಂತರ ಬಿಟ್ಟುಹೋಗುವ ಯುವ ಸದಸ್ಯರನ್ನು ಉಳಿಸಿಕೊಂಡು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸದಸ್ಯತ್ವವನ್ನು ಹೆಚ್ಚಿಸುವ ಸಲುವಾಗಿ ಸಾಹಸಕ್ಲಬ್ ಪರಿಚಯಿಸಲಾಗಿದೆ.

**ಉದ್ದೇಶಗಳು :**

**ಸದಸ್ಯತ್ವ ವಿಕಾಸ**

* ಹೊರಹೋಗುವ ಯುವಕರನ್ನು ಸಂಘಟನೆಯಲ್ಲಿ ಹೆಚ್ಚುಕಾಲ ಉಳಿಸಿಕೊಳ್ಳಲು
* ಯುವಕರಲ್ಲಿ ನಾಯಕತ್ವ ಸಾಮರ್ಥ್ಯಗಳನ್ನು ಬೆಳೆಸಲು
* ದೈಹಿಕ ಸಾಮರ್ಥ್ಯ ಬೆಳೆಸಲು
* ಪ್ರಕೃತಿಯೊಂದಿಗೆ ಹೊಂದಾಣಿಕೆ ಪ್ರವರ್ತಿಸಲು
* ಯುವಕರು ತಮ್ಮ ವಿರಾಮದ ವೇಳೆಯಲ್ಲಿ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು

**ರಚನೆ :** ಗ್ರಾಮದ ಒಂದು ಭಾಗದಲ್ಲಿ ಕನಿಷ್ಠ 8 ಮಂದಿಯ ಸದಸ್ಯತ್ವದೊಂದಿಗೆ ಸಾಹಸ ಕ್ಲಬ್ ರಚಿಸಲಾಗುವುದು.

**ನೋಂದಣಿ :** ಪ್ರತಿ ಸಾಹಸ ಕ್ಲಬ್, ಸ್ಥಳೀಯ / ಜಿಲ್ಲಾ ಸಂಸ್ಥೆಯ ಮುಖಾಂತರ ನಮ್ಮ ರಾಜ್ಯ ಸಂಸ್ಥೆಯಲ್ಲಿ ನಿಗಧಿಪಡಿಸಿದ ಶುಲ್ಕದೊಡನೆ ನೋಂದಾಯಿಸಲ್ಪಡಬೇಕು. ಸ್ಥಳೀಯ / ಜಿಲ್ಲಾ ಸಂಸ್ಥೆಯ ಶಿಫಾರಸ್ಸಿನಮೇರೆಗೆ. ಪ್ರತಿ ಕ್ಲಬ್‌ಗೆ ರಾಜ್ಯ ಸಂಸ್ಥೆಯಿಂದ ಒಂದು ಸನ್ನದನ್ನು ನೀಡಲಾಗುತ್ತದೆ.

**ಸಾಹಸ ಕ್ಲಬ್‌ನ ಕಛೇರಿ :** ತಮ್ಮ ಯೋಜನೆಗನುಗುಣವಾಗಿ ಸದಸ್ಯರು ಕಾರ್ಯಕ್ರಮಗಳ ಬಗ್ಗೆ ಮತ್ತು ಚಟುವಟಿಕೆಗಳ ಬಗ್ಗೆ ಚರ್ಚಿಸಲು ಅಥವಾ

ಅವುಗಳಲ್ಲಿ ಭಾಗವಹಿಸಲು ಸಾಹಸ ಕ್ಲಬ್ ಒಂದು ಕಛೇರಿಯನ್ನು ಹೊಂದಿರುತ್ತದೆ.

**ವ್ಯಾಪ್ತಿ :** ಸಾರ್ವಜನಿಕ ಸೇವೆಯ ಸರ್ಕಾರಿ ಇಲಾಖೆ / ಸಂಸ್ಥೆ / ಕಾರ್ಖಾನೆ / ಗ್ರಾಮ / ಮೊಹಲ್ಲ / ಸ್ಥಳೀಯ ಪ್ರದೇಶ ಇವುಗಳಿಗಾಗಿ ಕ್ಲಬ್ ರಚಿಸಲಾಗುತ್ತದೆ.

**ಕ್ಲಬ್‌ನ ಹೆಸರು :** ಪ್ರತಿ ಕ್ಲಬ್‌ಗೆ ಒಬ್ಬ ರಾಷ್ಟ್ರೀಯ ನಾಯಕನ ಹೆಸರಿಡಲಾಗುತ್ತದೆ.

**ಸದಸ್ಯತ್ವ :** ಜನಾಂಗ, ಜಾತಿ ಅಥವಾ ಮತದ ತಾರತಮ್ಯವಿಲ್ಲದೆ, ಸ್ಥಳದಲ್ಲಿ ವಾಸಿಸುವ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮೂಲಾಧಾರಗಳನ್ನು ಒಪ್ಪಿಕೊಳ್ಳುವ, ಕ್ಲಬ್‌ನ ನಿಯಮಗಳನ್ನು ಒಪ್ಪಿಕೊಳ್ಳಲು ಇಚ್ಛೆಯುಳ್ಳ, ಕನಿಷ್ಠ ವಿದ್ಯಾರ್ಹತೆಯುಳ್ಳ, ದೃಢಕಾಯ ಹಾಗೂ ದೃಢಮನಸ್ಸುಳ್ಳ, ಭಾರತದ ಎಲ್ಲಾ ನಾಗರೀಕರಿಗೆ ಕ್ಲಬ್‌ನ ಸದಸ್ಯತ್ವ ಮುಕ್ತವಾಗಿರುತ್ತದೆ.

**ನಾಯಕತ್ವ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಸಾಹಸ ಸಂಸ್ಥೆಯು ನಡೆಸುವ ಸಾಹಸ ನಾಯಕರ ಶಿಕ್ಷಣ ಕ್ರಮ ಪೂರೈಸಿರುವ ಮತ್ತು 25 ರಿಂದ 45 ವರ್ಷದ ಒಳಗಿರುವ ವ್ಯಕ್ತಿ ಪ್ರತಿ ಕ್ಲಬ್‌ನ ನಾಯಕನಾಗಿರುತ್ತಾನೆ.

**ಸಮಿತಿ :** ಪ್ರತಿ ಕ್ಲಬ್‌ನಲ್ಲಿ ಒಂದು ಕ್ಲಬ್ ಸಮಿತಿ ಇರುತ್ತದೆ. ಅದರಲ್ಲಿ

ಒಬ್ಬ ಅಧ್ಯಕ್ಷ

ಒಬ್ಬ ಉಪಾಧ್ಯಕ್ಷ

ಕಾರ್ಯದರ್ಶಿ (ಕ್ಲಬ್‌ನ ನಾಯಕನು, ಸಮಿತಿಯ ಪದನಿಮಿತ್ತ ಕಾರ್ಯದರ್ಶಿಯಾಗಿರುತ್ತಾನೆ)

ಖಜಾಂಚಿ

ಸಾಹಸ ಕ್ಲಬ್‌ನ ಸದಸ್ಯರಲ್ಲಿ 2 ಅಥವಾ 4 ಮಂದಿ ಇರುತ್ತಾರೆ.

**ಸಮಿತಿಯ ಕರ್ತವ್ಯಗಳು :**

1. ಕ್ಲಬ್‌ನ ಚರ ಮತ್ತು ಸ್ಥಿರ ಆಸ್ತಿಗಳನ್ನು ನಿರ್ವಹಣೆ ಮಾಡುವುದು.
2. ಕ್ಲಬ್‌ನ ಕಾರ್ಯಕ್ರಮ ಮತ್ತು ಚಟುವಟಿಕೆಗಳನ್ನು ನಿರ್ಧರಿಸುವುದು.
3. ಸದಸ್ಯತ್ವವನ್ನು ಒಪ್ಪಿಕೊಳ್ಳುವುದು.
4. ಅನ್ವೇಷಣಾ ಹೊರ ಸಂಚಾರ ಚಟುವಟಿಕೆಗಳಿಗೆ ಸಮ್ಮತಿಸುವುದು.

**ನಿಧಿ :** ಗುರಿ, ನೀತಿ, ನಿಯಮ, ಸಂಘಟನೆ ಭಾಗ-1ರಲ್ಲಿ ತಿಳಿಸಿರುವಂತೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ನಿಧಿ ಸಂಗ್ರಹಣೆ ನಿಯಮಗಳಿಗೆ ಬದ್ಧರಾಗಿ, ಸ್ಥಳೀಯ ಸಂಪನ್ಮೂಲಗಳ ಸಹಾಯದಿಂದ ನಿಧಿ ಸಂಗ್ರಹಣೆ ಮಾಡಬಹುದು.

**ಸಾಹಸ ಕ್ಲಬ್‌ನ ಸದಸ್ಯರಿಗೆ ಸಮವಸ್ತ್ರ :**

**ಟೋಪಿ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲೋಗೋಉಳ್ಳ ನೀಲಿ ಬಣ್ಣದ ಟೋಪಿ

**ಷರ್ಟ್ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಾದರಿಯ ಬೂದು ಬಣ್ಣದ (ಗ್ರೇ) ಷರ್ಟ್ ಅಥವಾ ಟೀ ಷರ್ಟ್

**ಕಂಠವಸ್ತ್ರ :** ಘಟಕಕ್ಕೆ ವಿಶೇಷವಾಗಿ ರೂಪಿಸಿದ ಕಂಠವಸ್ತ್ರ

**ಷರಾಯಿ :** ಸಾಗರ ನೀಲಿ ಬಣ್ಣದ ಷರಾಯಿ / ಜೀನ್ಸ್, ಮೊಣಕಾಲಿನಿಂದ ಕೆಳಗೆ ಎರಡೂ ಕಾಲುಗಳ ಮೇಲೆ ಎರಡು ಜೇಬುಗಳು.

**ಕಿರು ಚೀಲ:** ಸೊಂಟ ಪಟ್ಟಿಯೊಡನೆ ಒಂದು ಕಪ್ಪು ಕಿರುಚೀಲ

**ಪಾದರಕ್ಷೆ :** ಕಪ್ಪು ಬಣ್ಣದ ಬೇಟೆಗಾರರ ಶೂ ಅಥವಾ ಆಟದ ಶೂ

**ಕ್ಲಬ್‌ನ ಕಾರ್ಯಕ್ರಮ :**

ಸ್ಥಳೀಯ ಆಟಗಳು

ಕುಸ್ತಿ, ಮಲ್ಲಕಂಬ, ಯೋಗ

ಸಾಹಸಮಯ ಆಟಗಳು

ವಿಸ್ತೃತ ಆಟಗಳು / ಮುನ್ನುಗ್ಗುವ ಆಟಗಳು

ಶಿಲಾರೋಹಣ

ಸ್ಕೇಟಿಂಗ್

ಸಾಹಸ ಹೊರಸಂಚಾರ

ರಾತ್ರಿ ಹೊರಸಂಚಾರ

ಅನ್ವೇಷಣೆ

ಶಿಬಿರವಾಸ

ಸಂರಕ್ಷಣೆ

ಪ್ರಕೃತಿ ಸಂರಕ್ಷಣೆ

ರೇಸ್‌ಗಳು, ಸಮರ ಕಲೆಗಳು, ಸಾಹಸ ಪರ್ಯಟನೆ, ಸೈಕಲ್ ಮೋಟರ್ ಸೈಕಲ್, ಹೊರಸಂಚಾರ ಪರಿಸರ ಶಿಕ್ಷಣ, ಪ್ರಕೃತಿ ಸುತ್ತಾಟ, ವೀಕ್ಷಣೆ ಮತ್ತು ನಿಗಮನ, ಛಾಯಾಗ್ರಹಣ, ಈಜುವಿಕೆ

**ಮುಂದುವರೆದ ಸಾಹಸ ಚಟುವಟಿಕೆಗಳು**

ಪರ್ವತಾ ರೋಹಣ, ಸ್ಕೇಟಿಂಗ್, ಮಂಜಿನ ಮೇಲೆ ಸ್ಕೇಟಿಂಗ್, ಅನುವಾಯುಯಾನ (ಪ್ಯಾರಾಗ್ಲೈಡಿಂಗ್), ಅನುಜಲಯಾನ (ಪ್ಯಾರಾಸೈಲಿಂಗ್), ಜಲ ಕ್ರೀಡೆಗಳು, ಜನಸಂಖ್ಯೆ, ಶಿಕ್ಷಣ ಪದಕ, ನಕ್ಷತ್ರ ವೀಕ್ಷಣೆ, ರ್‍ಯಾಂಬ್ಲರ್ ಪದಕ **ತಮ್ಮ ನಿಯಮಿತ ಕಾರ್ಯಕ್ರಮದ ಅಂಗವಾಗಿ, ಸಾಹಸ ಕ್ಲಬ್‌ಗಳು ಪ್ರವರ್ತಿಸಬೇಕಾದ ಸ್ಕೌಟಿಂಗ್ ಚಟುವಟಿಕೆಗಳು** ಪ್ರಾರ್ಥನೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮೂಲಾಧಾರಗಳು, ದ್ವಿತೀಯ ಸೋಪಾನದವರೆಗಿನ ಮತ್ತು ರಾಜ್ಯ ಪುರಸ್ಕಾರ ಸ್ಕೌಟ್‌ನ ಪರೀಕ್ಷೆಗಳು ಕಗ್ಗಾಡುವಾಗು ಅಡುಗೆ, ಪ್ರಥಮ ಚಿಕಿತ್ಸೆ, ಅಗ್ರಗಾಮಿತ್ವ, ನಕ್ಷೆ ಓದುವಿಕೆ, ರಕ್ಷಣೆ ಮತ್ತು ಅಗ್ನಿ ಶಮನ

**ಸಾಹಸ ಕ್ಲಬ್ ನಾಯಕನ ಅರ್ಹತೆಗಳು**

ಸಾಹಸ ನಾಯಕನ ಶಿಕ್ಷಣ ಕ್ರಮದಲ್ಲಿ ಭಾಗವಹಿಸಲು ಈ ಕೆಳಕಂಡ ಅರ್ಹತೆಗಳು ಇರಬೇಕು.

**ವಯಸ್ಸು** : 25 ರಿಂದ 45ರ ಒಳಗೆ (ಕಟ್ಟು ನಿಟ್ಟಾಗಿ)

**ವಿದ್ಯಾರ್ಹತೆ :** ಕನಿಷ್ಠ ಮೆಟ್ರಿಕ್ಯುಲೇಷನ್

**ಅಪೇಕ್ಷಣೀಯ** : ಇಂಗ್ಲೀಷ್ ಮತ್ತು ಹಿಂದಿ ಭಾಷೆಗಳ ಜ್ಞಾನ ಸಾಹಸ ಚಟುವಟಿಕೆಗಳ ಆಯಾಸವನ್ನು ತಡೆದುಕೊಳ್ಳುವ ದೃಢಕಾಯ.

ಶಿಕ್ಷಣ ಕ್ರಮದ ಅವಧಿ 7 ದಿವಸಗಳು, 4 ದಿವಸಗಳ ಸಾಹಸ ಕಾರ್ಯಕ್ರಮ ಸೇರಿರುತ್ತದೆ. ಸಾಹಸ ನಾಯಕರ ಶಿಕ್ಷಣ ಕ್ರಮದ ಪಠ್ಯ ವಸ್ತುವನ್ನು ತರಬೇತಿ ವಿನ್ಯಾಸ (Scheme of Training)ದಲ್ಲಿ ಸೇರಿಸಲಾಗಿದೆ.

# ಪ್ರಧಾನ ಮಂತ್ರಿಗಳ ಪರಿತೋಷದ ಸ್ಪರ್ಧೆ

1. **ಉದ್ದೇಶ :** ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಮುದಾಯ ಸೇವೆ ಮತ್ತು ಸಮುದಾಯ ಅಭಿವೃದ್ಧಿ ಯೋಜನೆಗಳನ್ನು ಕೈಗೊಳ್ಳಲು ಉತ್ತೇಜಿಸುವುದು.
2. **ಅವಧಿ :** ಪ್ರಸಕ್ತ ವರ್ಷದ 1ನೇ ಜುಲೈನಿಂದ ಮುಂದಿನ ವರ್ಷದ 30ನೇ ಜೂನ್ ವರೆಗೆ
3. **ಅರ್ಹತೆ :** ರಾಜ್ಯ ಸಂಸ್ಥೆಗಳಲ್ಲಿ ನೊಂದಾಯಿಸಲ್ಪಟ್ಟ 1 ಜಿಲ್ಲೆಗೆ ಕನಿಷ್ಠ 2 ಸ್ಕೌಟ್-ಗೈಡ್ ತಂಡಗಳು ಭಾಗವಹಿಸಬಹುದು. ಪ್ರತಿ ರಾಜ್ಯದಿಂದ ಕನಿಷ್ಠ 2 ಜಿಲ್ಲೆಗಳು ಭಾಗವಹಿಸಬೇಕು.
4. **ನೊಂದಾವಣೆ :** ಪ್ರಸಕ್ತ ವರ್ಷದ 31ನೇ ಮೇ ಮೊದಲ ರಾಷ್ಟ್ರೀಯ ಕೇಂದ್ರ ಕಛೇರಿಯಲ್ಲಿ ದಳವನ್ನು ನೊಂದಾಯಿಸಬೇಕು.
5. **ನೊಂದಾಣಿ ಶುಲ್ಕ :** ಪ್ರತಿ ದಳಕ್ಕೆ ರೂ.10/-
6. **ದಾಖಲೆ ಪ್ರಸಕ್ತ :** ಸ್ಪರ್ಧೆಗಾಗಿ ನೊಂದಾಯಿಸಲ್ಪಟ್ಟ ಪ್ರತಿ ದಳಕ್ಕೆ 20 ದಾಖಲೆ ಪುಸ್ತಕವನ್ನು ರಾಷ್ಟ್ರೀಯ ಕೇಂದ್ರ ಕಛೇರಿಯಿಂದ ರಾಜ್ಯ ಸಂಸ್ಥೆಯ ಮೂಲಕ ನೀಡಲಾಗುವುದು.
7. **ನಿರ್ಣಯ :** ಜಿಲ್ಲಾ, ರಾಜ್ಯ ಮತ್ತು ರಾಷ್ಟ್ರೀಯ ಮಟ್ಟಗಳನ್ನು ನಿರ್ಣಯ ಕೈಗೊಳ್ಳಲಾಗುವುದು.
8. **ಪ್ರಶಸ್ತಿಗಳು :** ಪ್ರತಿ ರಾಜ್ಯದಲ್ಲಿ ಪ್ರತಿ ವಿಷಯದ ಗುಂಪನಲ್ಲಿ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದ ಮತ್ತು ಶೇ.70 ಕ್ಕಿಂತ ಹೆಚ್ಚು ಅಂಕ ಪಡೆದ ಸ್ಕೌಟ್ಸ್ ತಂಡ, ಗೈಡ್ ತಂಡಕ್ಕೆ ಪ್ರಧಾನ ಮಂತ್ರಿಗಳಿಂದ ಸಹಿ ಮಾಡಲ್ಪಟ್ಟ ಪ್ರಶಸ್ತಿ ಪತ್ರ ಹಾಗೂ ಪರಿತೋಷಕ ನೀಡಲಾಗುವುದು, ಶೇ.50 ಕ್ಕಿಂತ ಹೆಚ್ಚು ಅಂಕ ಪಡೆದ ಎಲ್ಲಾ ತಂಡಗಳಿಗೆ, ಪ್ರಧಾನ ಮಂತ್ರಿಗಳಿಂದ ಸಹಿ ಮಾಡಲ್ಪಟ್ಟ ಅರ್ಹತೆ ಪತ್ರ ನೀಡಲಾಗುವುದು.
9. **ಯೋಜನೆ ವ್ಯಾಪ್ತಿ :** 30 ಕುಟುಂಬಗಳಿಗಿಂತ ಕಡಿಮೆ ಹಾಗೂ 50 ಕುಟುಂಬಗಳಿಗಿಂತ ಹೆಚ್ಚು ಇರಬಾರದು.
10. **ಸ್ಪರ್ಧೆಗೆ ವಿಷಯಗಳು :** 3 ವಿಷಯ ಗುಂಪುಗಳಲ್ಲಿ ಸ್ಪರ್ಧೆ ಇರುತ್ತದೆ. ವಿಷಯ 1 ಕಡ್ಡಾಯ ಉಳಿದಂತೆ ವಿಷಯ 2, 3, 4ರಲ್ಲಿ ಒಂದನ್ನು ಆರಿಸಿಕೊಳ್ಳಬಹುದು.
11. **ದಾಖಲೆ ಪುಸ್ತಕಗಳ ಸಲ್ಲಿಕೆ :** ಸ್ಪರ್ಧೆಯು ಮುಗಿದ ನಂತರ 30ನೇ ಜುಲೈ ಒಳಗಾಗಿ ತಂಡವು ದಾಖಲೆ ಪುಸ್ತಕವನ್ನು ಜಿಲ್ಲೆಗೆ ಸಲ್ಲಿಸಬೇಕು ಹಾಗೂ ಜಿಲ್ಲೆಯು 30ನೇ ಆಗಸ್ಟ್ ಒಳಗಾಗಿ ಅವುಗಳನ್ನು ರಾಜ್ಯ ಸಂಸ್ಥೆಗೆ ಕಳುಹಿಸಬೇಕು.

ಮಾರ್ಗದರ್ಶಿ ಸೂಚನೆಗಳಿಗೆ ಹಾಗೂ ಆಗಿಂಗಾಗ್ಗೆ ಅಥವಾ ಬದಲಾವಣೆಗಳಿಗೆ ರಾಷ್ಟ್ರೀಯ ಕೇಂದ್ರ ಕಛೇರಿ ಸುತ್ತೋಲೆ ನೋಡಿರಿ.

## ಶಿಕ್ಷಕರಿಗೊಂದು ನೀತಿ ಸಂಹಿತೆ : ಇಪ್ಪತ್ತು ಸಾಮಾನ್ಯ ಸೂತ್ರಗಳು

1. ಪ್ರಪ್ರಥಮವಾದಿ ನಿಮ್ಮ ವೃತ್ತಿಯ ಬಗೆಗೆ ಪೂರ್ಣ ಅಭಿಮಾನವಿರಲಿ.
2. ಶಿಕ್ಷಣ ಸೇವೆ ಅತ್ಯಂತ ಪವಿತ್ರವಾದದ್ದು ಎಂಬುದು ಸದಾ ನೆನಪಿರಲಿ.
3. ನಿಮ್ಮ ಸೇವೆಯಲ್ಲಿ ಅವಿರತ ಶ್ರದ್ಧೆ ಮತ್ತು ಅನನ್ಯ ಬದ್ಧಥೆಯಿರಲಿ.
4. ಶಿಕ್ಷಕ ವೃತ್ತಿಯಲ್ಲಿ ಯಾವ ಕಾರಣಕ್ಕೂ ಉದಾಸೀನತೆ ತಲೆದೋರದಿರಲಿ.
5. ಶಾಲೆಗೆ ಬರುವ ಮಕ್ಕಳ ಬಗೆಗೆ ನಿಮ್ಮ ಮಕ್ಕಳಂತೆಯೇ ಪ್ರೀತಿ ವಾತ್ಸಲ್ಯಗಳಿರಲಿ.
6. ದೀನ-ದಲಿತರ ಮಕ್ಕಳ ಬಗೆಗೆ ನಿಮಗೆ ವಿಶೇಷ ಆಸಕ್ತಿ ಇರಲಿ.
7. ಸಮಯ ಪಾಲನೆಯ ಶಿಸ್ತಿಗೆ ನಿಮ್ಮ ಕಾರ್ಯವಿಧಾನ ಮಾದರಿಯಾಗಿರಲಿ.
8. ಸರ್ಕಾರ ಮತ್ತು ಸಾರ್ವಜನಿಕ ನಡುವೆ ನಿಮ್ಮ ಸಂಬಂಧ ಸೇತುವೆಯಾಗಿರಲಿ.
9. ಸಾರ್ವಜನಿಕ ಸಭ್ಯತೆಯ ರಕ್ಷಣೆಯ ಬಗೆಗೆ ಸದಾ ಎಚ್ಚರವಿರಲಿ.
10. ನಿಮ್ಮ ವೇಷ-ಭೂಷಣ ಮತ್ತು ನಡೆ-ನುಡಿಗಳ ತುಂಬ ಸರಳವಾಗಿರಲಿ.
11. ತರಗತಿಗೆ ಹೋಗುವ ಮುನ್ನ ಪೂರ್ಣ ಸಜ್ಜಾಗಿರಬೇಕು ಎಂಬುದು ಗಮನದಲ್ಲಿರಲಿ.
12. ಮಕ್ಕಳಲ್ಲಿ ಸ್ವಯಂಸೇವೆ ಮತ್ತು ರಾಷ್ಟ್ರ ಪ್ರಜ್ಞೆಯನ್ನು ಬೆಳೆಸಬೇಕು.
13. ಮಕ್ಕಳ ಮುಗ್ಧ ಮನೋಭಾವದ ಮೇಲೆ ಅರಿವಿನ ಬೀಜ ಬಿತ್ತಬೇಕು.
14. ಮಕ್ಕಳಲ್ಲಿ ಸ್ವಚ್ಛತೆ ಮತ್ತು ಪರಿಸರ ಪ್ರಜ್ಞೆಗಳನ್ನು ಮೂಡಿಸಬೇಕು.
15. ಕಲಿಸುತ್ತಲೇ ಕಲಿ ಎಂಬುದು ನಿಮ್ಮ ವೃತ್ತಿ ಸೂತ್ರವಾಗಿರಲಿ.
16. ಶಾಲೆಯ ಆಸ್ತಿ-ಪಾಸ್ತಿಗಳಿಗೆ ನೀವು ಧರ್ಮದರ್ಶಿಗಳೆಂಬುದು ನೆನಪಿರಲಿ.
17. ಜಾತಿ-ಮತ ಮತ್ತು ರಾಜಕೀಯಗಳಿಂದ ನೀವು ದೂರವಿರಬೇಕು.
18. ಮಕ್ಕಳ ಪೋಷಕರೊಂದಿಗೆ ಸೌಹಾರ್ದ ಸಂಬಂಧವಿರಲಿ.
19. ನೀವು ಶಾಲಾ ಶಿಕ್ಷಕರಷ್ಟೇ ಅಲ್ಲ; ಸಮಾಜ ಶಿಕ್ಷಕರೂ ಹೌದೆಂಬುದು ನೆನಪಿರಲಿ.
20. ಪ್ರತಿನಿತ್ಯ ಮಲಗುವ ಮುನ್ನ ದಿನಚರಿ ಬರೆಯುವುದನ್ನು ಮರೆಯದಿರಿ.

**ಶಿಕ್ಷಕರ ಪಂಚಸೂತ್ರಗಳು** : 1. ಕ್ರಿಯಾಶೀಲತೆ 2. ಪ್ರಾಮಾಣಿಕತೆ 3. ಕರ್ತವ್ಯಬದ್ಧತೆ 4. ಕ್ಷಮಾಶೀಲತೆ 5 ರಾಷ್ಟ್ರೀಯತೆ

**– ಗೊ.ರು. ಚನ್ನಬಸಪ್ಪ**

# ಸ್ಕೌಟುಗಳ ಪ್ರಗತಿಪರ ಪದಕಗಳು



ರಾಷ್ಟ್ರಪತಿ ಪದಕ



ರಾಜ್ಯ ಪುರಸ್ಕಾರ್



ತೃತೀಯ ಸೋಪಾನ



ದ್ವಿತೀಯ ಸೋಪಾನ



ಪ್ರಥಮ ಸೋಪಾನ


ಪ್ರವೇಶ್

## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ದೂರದರ್ಶಿತ್ವ

2024ರ ವೇಳೆಗೆ, ಅತ್ಯಂತ ಕ್ರಿಯಾಶೀಲ ಯುವಚಳವಳಿಯಾದ ಅಂತರರಾಷ್ಟ್ರೀಯ ವ್ಯಾಪ್ತಿಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಮೌಲ್ಯಾಧಾರಿತವಾದ, ಅತ್ಯಾಕರ್ಷಕ ಗುಣಗಳುಳ್ಳ, ಸ್ವಾವಲಂಬಿಯಾದ, ಲಿಂಗತಾರತಮ್ಯವಿಲ್ಲದ ಯುವಜನಾಂಗದ ಅವಶ್ಯಕತೆಗಳಿಗನುಗುಣವಾಗಿ ಬೆಳೆಯುತ್ತದೆ.

ಅಲ್ಲದೆ, ಸಮರ್ಥ ನಾಯಕರುಗಳ ಪರಿಣಾಮಕಾರಿ ಮಾರ್ಗದರ್ಶನದ ಮೂಲಕ ಮುಂದುವರೆದ ತಂತ್ರಜ್ಞಾನ, ಉತ್ತಮ ಆಡಳಿತ ವ್ಯವಸ್ಥೆಯುಳ್ಳ ಸವಾಲಿನಿಂದ ಕೂಡಿದ ಸಂಸ್ಥೆಯಾಗುತ್ತದೆ.

# ಸಂಸ್ಥಾಪಕರ ಅಂತಿಮ ಸಂದೇಶ



ಪ್ರೀತಿಯ ಸ್ಕೌಟುಗಳೇ,

ನೀವು "ಪೀಟರ್ ಪ್ಯಾನ್" ನಾಟಕವನ್ನು ಯಾವಾಗಲಾದರೂ ನೋಡಿದ್ದರೆ ಅದರಲ್ಲಿ ಕಡಲುಕಳ್ಳರ ಯಜಮಾನನು ಯಾವಾಗಲೂ ತನ್ನ ಮರಣಪೂರ್ವ ಭಾಷಣವನ್ನು ಮಾಡುತ್ತಿದ್ದನೆಂಬುದು ನೆನಪಿಗೆ ಬರಬಹುದು; ಏಕೆಂದರೆ ತನಗೆ ಮರಣ ಕಾಲವು ಬಂದಾಗ, ಅದನ್ನು ಹೇಳಲು ಬಹುಶಃ ಕಾಲಾವಕಾಶವಿರುವುದಿಲ್ಲವೆಂಬುದೇ ಅವನ ಭಯ. ನನ್ನ ವಿಷಯದಲ್ಲಿಯೂ ಹೆಚ್ಚು ಕಡಿಮೆ ಹಾಗೆಯೇ. ನಾನು ಈ ಕ್ಷಣದಲ್ಲಿ ಸಾಯದಿದ್ದರೂ, ಬರುವ ಕೆಲವು ದಿನಗಳಲ್ಲಿ ಸತ್ತು ಹೋದೇನು! ಆದ್ದರಿಂದ ನಿಮಗೆ ನನ್ನ ವಿದಾಯಕ ಸಂದೇಶವನ್ನು ನೀಡಲಿಚ್ಛಿಸುತ್ತೇನೆ.

ನೀವು ಕೇಳಿಸಿಕೊಳ್ಳುವ ಇದು ನನ್ನ ಕೊನೆಯ ಮಾತು, ನೆನಪಿಡಿ, ಯೋಚನೆ ಮಾಡಿ.

ನನ್ನದು ಅತ್ಯಂತ ಆಹ್ಲಾದಮಯವಾದ ಜೀವನವಾಗಿದ್ದಿತು. ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಅಂತಹುದೇ ಆಹ್ಲಾದಕರ ಜೀವನವಿರಬೇಕೆಂಬುದು ನನ್ನ ಆಶಯ.

ಈ ಅದ್ಭುತ ಪ್ರಪಂಚದಲ್ಲಿ, ಸಂತೋಷವಾಗಿಯೂ ಆನಂದವಾಗಿಯೂ ಇರಲೆಂದು ದೇವರು ನಮ್ಮನ್ನು ಸೃಷ್ಟಿಸಿದ್ದಾನೆಂದು ನಾನು ನಂಬುತ್ತೇನೆ. ಸಂತೋಷವೆಂಬುದು ಐಶ್ವರ್ಯದಿಂದಾಗಲೀ, ವೃತ್ತಿಯಲ್ಲಿ ಜಯಶೀಲರಾದರಾಗಲೀ, ಆತ್ಮಲೋಲುಪ್ತಿಯಿಂದಾಗಲೀ ಬರುವುದಿಲ್ಲ. ನೀವು ಬಾಲಕರಾಗಿದ್ದಾಗ, ಆರೋಗ್ಯವಂತರಾಗಲು, ಬಲಶಾಲಿಗಳಾಗಲು, ಪ್ರಯತ್ನಿಸಬೇಕು. ಇದರಿಂದ, ನೀವು ದೊಡ್ಡವರಾದಾಗ, ಉಪಯುಕ್ತವಾದ ಜೀವನವನ್ನು ನಡೆಸಲೂ ಮತ್ತು ಆನಂದದಾಯಕವಾಗಿ ದಿನಗಳನ್ನು ಕಳೆಯಲು ಸಾಧ್ಯವಾಗುತ್ತದೆ.

ನೀವು ಜೀವನದಲ್ಲಿ ಆನಂದಿಸಲು, ನಿಮಗಾಗಿ ಈ ಪ್ರಪಂಚದಲ್ಲಿ ಎಂತಹ ಸುಂದರವಾದ ಮತ್ತು ಅದ್ಭುತವಾದ ವಸ್ತುಗಳನ್ನು ದೇವರು ಸೃಷ್ಟಿಸಿದ್ದಾನೆಂದು ಪ್ರಕೃತಿ ಅಧ್ಯಯನದ ಮೂಲಕ ತಿಳಿದುಬರುತ್ತದೆ.

ನಿಮಗಿರುವುದರಲ್ಲಿ ತೃಪ್ತಿಪಡಿ. ಅದರ ಸಂಪೂರ್ಣ ಲಾಭವನ್ನು ಪಡೆಯಿರಿ. ಯಾವುದೇ ಸಂದರ್ಭದಲ್ಲಿಯೂ ಅದರ ಕತ್ತಲು ಅಥವಾ ನೆರಳಿನ ಭಾಗವನ್ನು ನೋಡಬೇಡಿ. ಬದಲು ಅದರ ಬೆಳಕಿನ ಪ್ರಕಾಶಮಾನವಾದ ಭಾಗವನ್ನು ನೋಡಿರಿ. ನಿಜವಾದ ಆನಂದವೆಂದರೆ ಇತರರಿಗೆ ಸಂತೋಷವನ್ನು ನೀಡುವುದು, ಈ ಪ್ರಪಂಚವನ್ನು ನೀವು ಕಂಡ ಸ್ಥಿತಿಗಿಂತಲೂ ಉತ್ತಮವಾದ ಸ್ಥಿತಿಯಲ್ಲಿ ಬಿಡಲು ಪ್ರಯತ್ನಿಸುವುದು.

ಏನಾದರಾಗಲೀ ವೃಥಾ ಕಾಲಹರಣ ಮಾಡಿಲ್ಲವೆಂಬ, ನಿಮ್ಮ ಕೈಲಾದಷ್ಟು ಪ್ರಯತ್ನಿಸಿರುವಿರೆಂಬ ಆತ್ಮತೃಪ್ತಿಯಿಂದ ಸಂತೋಷವಾಗಿ ಸಾವನ್ನೆದುರಿಸುತ್ತೀರಿ. ಈ ರೀತಿಯಲ್ಲಿ ನೀವು ಆನಂದದಿಂದ, ಸಾವನ್ನಪ್ಪಲು "ಸದಾ ಸಿದ್ಧರಾಗಿರಿ" ಯಾವಾಗಲೂ ನೀವು ದೊಡ್ಡವರಾದ ಮೇಲೂ ಸ್ಕೌಟ್ ಪ್ರತಿಜ್ಞೆಯಂತೆ ನಡೆದುಕೊಳ್ಳಿ ಅದನ್ನು ಸಾಧಿಸಲು ದೇವರು ನಿಮಗೆ ಸಹಾಯ ಮಾಡುತ್ತಾನೆ.

ನಿಮ್ಮ ಗೆಳೆಯ

**ಬೇಡನ್ ಪೋವೆಲ್ ಆಫ್ ಗಿಲ್‌ವೆಲ್**